# ಗುಣಾತ್ಮಕ ಸ್ಪರ್ಶ



## ತಿರುಮಲೆ - ತಿರುಪತಿ ದೇವಸ್ಥಾನಗಳವರು ಆರಂಭಿಸಿರುವ

# ಶ್ರೀ ಬಾಲಾಜಿ ಆರೋಗ್ಯ ವರಪ್ರಸಾದಿನೀ ಯೋಜನೆ

ಪ್ರಾಚೀನ ಕಾಲದಿಂದಲೂ ತಿರುಮಲೆಯು ಒಂದು ಮಹತ್ವದ ಯಾತ್ರಾಕ್ಷೇತ್ರವಾಗಿದ್ದು ಪ್ರತಿದಿನವೂ ಸಾವಿರಾರು ಮಂದಿ ಯಾತ್ರಿಕ ಭಕ್ತರು ಆಗಮಿಸಿ ಶ್ರೀ ವೆಂಕಟೇಶ್ವರಸ್ವಾಮಿಯಲ್ಲಿ ತಮ್ಮ ಐಹಿಕ ಆಧ್ಯಾತ್ಮಿಕ ಕ್ಷೇಮ ಲಾಭಗಳಿಗಾಗಿ ಪ್ರಾರ್ಥನೆ ಸಲ್ಲಿಸುತ್ತಿದ್ದಾರೆ

ಯಾತ್ರಿಕ ಸೇವೆಯಲ್ಲಿ ಸಮರ್ಪಿತವಾಗಿರುವ ತಿ ತಿ ದೇವಸ್ಥಾನಗಳ ಮಾನವಸೇವೆಯ ಒಂದು ಭಾಗವೇ ರೋಗ ಚಿಕಿತ್ಸೆ, ತಿ ತಿ ದೇವಸ್ಥಾನಗಳು ಈಗಾಗಲೇ ಒಂದು ಕುಷ್ಠರೋಗ ನಿವಾರಣಾಕೇಂದ್ರ, ವಿಕಲಾಂಗ ಚಿಕಿತ್ಸಾ ಆಸ್ಪತ್ರೆ, ಅನಾಥಾಲಯ, ಕೇಂದ್ರ ಆಸ್ಪತ್ರೆಗಳನ್ನು ನಿರ್ವಹಿಸುತ್ತಿವೆ ಅಗತ್ಯವಿರುವ ಬಡ ರೋಗಿಗಳ ಸೇವೆಗೆಂದು ದೆಹಲಿ, ಪಾಂಡಿಚೇರಿ, ಚಂದಿಗಢಗಳಲ್ಲಿರುವಂತೆ, ಅತ್ಯಾಧುನಿಕ ಯಂತ್ರೋಪಕರಣಗಳಿಂದ ಕೂಡಿದ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆ - ಶ್ರೀ ವೆಂಕಟೇಶ್ವರ ಇನ್ಸ್‌ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್ (ಸ್ವಿಮ್ಸ್) ಅನ್ನು ಸ್ವಾಮಿಯ ಆಶೀರ್ವಾದದೊಡನೆ ಆರಂಭಿಸಲಾಗಿದೆ ಇಲ್ಲಿ ವೈದ್ಯಕೀಯ ವಿಜ್ಞಾನದ ಸೇವೆ, ತರಬೇತಿ, ಶಿಕ್ಷಣಗಳನ್ನು ನೀಡುವುದೇ ಅಲ್ಲದೆ, ಸಂಶೋಧನೆ, ಅಭಿವೃದ್ಧಿಗಳನ್ನೂ ಸಾಧಿಸಲು ಅವಕಾಶ ಮಾಡಲಾಗಿದೆ

ಇಂತಹ ಅತ್ಯಾಧುನಿಕ ಯಂತ್ರೋಪಕರಣಗಳ ಆಸ್ಪತ್ರೆಯ ಅನುಕೂಲಗಳು ನಮ್ಮ ಎಲ್ಲ ಸಹೋದರರಿಗೂ ಸಿಗುವಂತಾಗಬೇಕು

ಈ ಘನ ಉದ್ದೇಶದಿಂದ ಶ್ರೀ ಬಾಲಾಜೀ ಆರೋಗ್ಯ ವರಪ್ರಸಾದಿನೀ ಯೋಜನೆಯನ್ನು ಆರಂಭಿಸಲಾಗಿದೆ ಇದರಿಂದಾಗಿ ಅಗತ್ಯವಿರುವ ಎಲ್ಲರಿಗೂ ಅನುಕೂಲಕರವಾದ ದರಗಳಲ್ಲಿ ಅತ್ಯಾಧುನಿಕ ಸೌಕರ್ಯಗಳ ಚಿಕಿತ್ಸಾ ಸೌಲಭ್ಯ ದೊರೆಯುವಂತೆ ಆಗುವುದು ಈ ಯೋಜನೆಯ ವಿವರಗಳನ್ನು ಕೆಳಗೆ ನೀಡಲಾಗಿದೆ ದಾನಿಗಳು ಉದಾರ ಹೃದಯದಿಂದ ದಾನ ನೀಡಬೇಕೆಂದು ಆಹ್ವಾನಿಸುತ್ತೇವೆ

**ಯೋಜನೆಯ ವಿವರ**

* ಸ್ವಿಮ್ಸ್‌ಗೆ ನೀಡುವ ಎಲ್ಲ ದಾನಗಳೂ 80 (ಜಿ) ಕಲಮಿನಂತೆ 100 ಶತಾಂಶ ಆದಾಯಕರ ವಿಮುಕ್ತವಾಗಿರುವುದು
* ದಾನಗಳನ್ನು ಯಾರುದೇಕಾದರೂ - ವ್ಯಕ್ತಿ, ಕುಟುಂಬ, ಸಂಘ, ಸಂಸ್ಥೆಗಳು - ಮಾಡಬಹುದು
* ಒಂದು ಲಕ್ಷ ರೂಪಾಯಿ ಹಾಗೂ ಹೆಚ್ಚಿನ ಹಣ ನೀಡಿದವರ ಹೆಸರುಗಳನ್ನು ಆಸ್ಪತ್ರೆಯ ಸ್ವಾಗತ ಕಚೇರಿಯಲ್ಲಿ ಪ್ರಕಟಿಸಲಾಗುವುದು
* ಐದು ಲಕ್ಷ ಮತ್ತು ಹೆಚ್ಚಿನ ಹಣ ದಾನ ಮಾಡಿದವರ ಹೆಸರುಗಳನ್ನು ಕೋಣೆಗಳಿಗಿಡಲಾಗುವುದು
* ಒಂದು ಉಪವಿಭಾಗಕ್ಕೆ 15 ಲಕ್ಷ ರೂಪಾಯಿಗಳಿಗಿಂತ ಹೆಚ್ಚು ದಾನ ನೀಡಿದವರ ಹೆಸರನ್ನಿಡಬಹುದು
* 15 ಲಕ್ಷ ರೂ ಗಳಿಗೂ ಹೆಚ್ಚಿನ ದಾನ ನೀಡುವವರ ಹೆಸರಿನಲ್ಲಿ ಒಂದು ಘಟಕವನ್ನೂ ಹೆಸರಿಸಬಹುದು
* ಒಂದು ಸ್ನಾತಕೋತ್ತರ ಶಿಕ್ಷಣ ವಿದ್ಯಾರ್ಥಿನಿಲಯ, ಶಸ್ತ್ರಚಿಕಿತ್ಸಾ ಕೋಣೆ, ನರ್ಸ್‌ಗಳ ವಸತಿ ಗೃಹ, ರೋಗಿಗಳ ನೆರವಿಗರ ಸತ್ರಗಳಲ್ಲಿ ಒಂದಕ್ಕೆ - ಒಂದು ಕೋಟಿ ರೂಪಾಯಿ ನೀಡುವವರ ಹೆಸರನ್ನಿಡಬಹುದು
* ಐದು ಲಕ್ಷ ರೂಪಾಯಿಗಳ ದಾನದ ಮೂಲಕ ವರ್ಷದಲ್ಲಿ ಒಂದು ಪ್ರಮುಖ ಶಸ್ತ್ರ ಚಿಕಿತ್ಸೆಯನ್ನು ಆಗಮಾಡಿಸಬಹುದು
* ಪೂರ್ಣವಾಗಿ ಸಂಶೋಧನೆಯ ಉದ್ದೇಶದ ಪೀಠಗಳನ್ನು ಹತ್ತು ಲಕ್ಷ ರೂಪಾಯಿ ದಾನಗಳಿಂದ ಸ್ಥಾಪಿಸಬಹುದು

ಐದು ಲಕ್ಷ - ಮತ್ತು ಹೆಚ್ಚಿನ ದಾನ ನೀಡುವವರಿಗ ತಿರುಮಲೆಯಲ್ಲಿ ಕಲ್ಪಿಸುವ ಸೌಲಭ್ಯಗಳು

* ಸ್ವಾಮಿಯ ಓಲಗದಲ್ಲಿ ಆವರ್ತನ ಪದ್ಧತಿಯಲ್ಲಿ ದಾನಿಯ ಹೆಸರನ್ನು ಹೇಳಲಾಗುವುದು
* ವರ್ಷದಲ್ಲಿ ಮೂರುದಿನಗಳು ದಾನಿಯ ಕುಟುಂಬದ ಐವರಿಗ ಬಿಡುವಿನ ಸಮಯದಲ್ಲಿ ಆರತಿ ಸಮೇತ ಸ್ವಾಮಿ ದರ್ಶನದ ಏರ್ಪಾಡು
* ವರ್ಷದಲ್ಲಿ ಮೂರು ದಿನಗಳ ಕಾಲ ದಾನಿಯ ಕುಟುಂಬದ ಐವರಿಗೆ ಅತಿಗಣ್ಯ ವ್ಯಕ್ತಿಗಳ ವಸತಿಯನ್ನು ಉಚಿತವಾಗಿ ನೀಡಲಾಗುವುದು
* ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀ ಅಮ್ಮನವರ ಬಂಗಾರದ ಚಿತ್ರದ ಜ್ಞಾಪಿಕೆಯನ್ನು ದಾನಿಗೆ ನೀಡಲಾಗುವುದು
* ದಾನಿಗಳು ಆಸ್ಪತ್ರೆಗೆ ಬೇಕಾದ ಉಪಕರಣಗಳು, ವಾಹನಗಳು, ದಾನ ನೀಡಬಹುದು ಅಪೇಕ್ಷೆ ಪಟ್ಟಲ್ಲಿ ಗ್ರಾಮಾಂತರ ಪ್ರದೇಶಗಳಲ್ಲಿನ ಆರೋಗ್ಯ ತಪಾಸಣಾ ಶಿಬಿರಗಳನ್ನು ನಡೆಸಲು ಮುಂದೆ ಬರಬಹುದು

ಮಿಕ್ಕ ವಿವಯಗಳನ್ನು ತಿಳಿಯಲು ಬರೆಯಬೇಕಾದ ವಿಳಾಸ-

**ಕಾರ್ಯನಿರ್ವಹಣಾಧಿಕಾರಿ,**
ತಿರುಮಲೆ ತಿರುಪತಿ ದೇವಸ್ಥಾನಗಳು - ತಿರುಪತಿ

ಅಥವಾ

**ನಿರ್ದೇಶಕರು,**
ಶ್ರೀ ವೆಂಕಟೇಶ್ವರ ಇನ್ಸ್‌ಟಿಟ್ಯೂಟ್ ಆಫ್
ಮೆಡಿಕಲ್ ಸೈನ್ಸಸ್, ತಿರುಪತಿ



ಅಲ್ಲಿ ನೋಡಲು ರಾಮ ಇಲ್ಲಿ ನೋಡಲು ರಾಮ
ಎಲ್ಲೆಲ್ಲಿ ನೋಡಿದರಲ್ಲಿ ರಾಮರೂಪ -ಪ-

ರಾವಣನ ಮೂಲ ಬಲ ಕಂಡು ಕಪಿಸೇನೆ
ಆವಾಗಲೇ ಬೆದರಿ ಓಡಿದವು
ಆ ವೇಳೆ ನರನಾಗಿ ಇರಬಾರದೆಂದೆಣಿಸಿ
ದೇವ ರಾಮಚಂದ್ರ ಬಹುರೂಪ ತಾನಾದ -1-

ಅವನಿಗೆ ಇವ ರಾಮ ಇವನಿಗೆ ಅವ ರಾಮ
ಭವಿಯೊಳಗೆ ಬೇರೆ ರೂಪ ಉಂಟೆ?
ಅವನಿಯೊಳಿರುತಿಪ್ಪ ದುರಳ ಜನರೆಲ್ಲ
ಅವರವರೆ ಹೊಡೆದಾಡಿ ಹತರಾಗಿ ಹೋದರು -2-

ಹನುಮಾದಿ ಸಾಧು ಜನರು ಅಪ್ಪಿಕೊಂಡು
ಕುಣಿಕುಣಿದಾಡಿದರು ಅತಿ ಹರುಷದಲಿ
ಕ್ಷಣದಲ್ಲಿ ಪುರಂದರ ವಿಠಲರಾಯನು
ಕೊನೆಗೊಡೆಯನು ತಾನೊಬ್ಬನಾಗಿ ನಿಂತನು -3-

- ಶ್ರೀ ಪುರಂದರದಾಸರು.

ಸಂದರ್ಶಿಸಿ. ಆನಂದಿಸಿ.

## ಶ್ರೀ ವೆಂಕಟೇಶ್ವರಸ್ವಾಮಿ ಆಲಯ, ತಿರುಮಲೆ.

# ಶ್ರೀ ಪದ್ಮಾವತೀ ಶ್ರೀನಿವಾಸ ಪರಿಣಯ

**24-4-99 ರಿಂದ 26-4-99 ವರೆಗೆ**




| | | |
|---|---|---|
| 24-4-99 | ಶನಿವಾರ | ಗಜವಾಹನೋತ್ಸವ |
| 25-4-99 | ಭಾನುವಾರ | ಅಶ್ವವಾಹನೋತ್ಸವ |
| 26-4-99 | ಸೋಮವಾರ | ಗರುಡವಾಹಮೋತ್ಸವ |

ವೈಶಾಖ ಶುದ್ಧ ನವಮಿ ದಶಮಿ ಏಕಾದಶಿಗಳಂದು ನಡೆಯುವ ಶ್ರೀ ಪದ್ಮಾವತೀ ಶ್ರೀನಿವಾಸ ಪರಿಣಯದಲ್ಲಿ ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳೂ ಉಂಟು ಗೃಹಸ್ಥರು ಆರ್ಜಿತ ಸೇವಾಶುಲ್ಕ ರೂ 5000/- (ದಿನಂಪ್ರತಿ) ನೀಡಿ ಭಾಗವಹಿಸಬಹುದು (ಐದುಮಂದಿಗೆ ಆಲಯ ಪ್ರವೇಶ ಹಾಗೂ ರೇಷ್ಮೆಯ ವಸ್ತ್ರ ಬಹುಮಾನವುಂಟು ಪ್ರಸಾದ-5 ದೊಡ್ಡಲಾಡು 5 ವಡೆ) ಹೆಚ್ಚಿನ ವಿವರಗಳಿಗೆ ಬಳಿಯಲ್ಲಿನ ತಿ ತಿ ದೇ ವಿಚಾರಣಾಕೇಂದ್ರದಲ್ಲಿ ವಿಚಾರಿಸಿ

ತಾವೂ ಬನ್ನಿ. ತಿ.ತಿ.ದೇ. ತಮ್ಮವರನ್ನೂ ಕರೆತನ್ನಿ.




ವೇಂಕಟಾದ್ರಿ ಸಮಂಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ
ವೇಂಕಟೇಶ ಸಮೋದೇವೋ ನ ಭೂತೋ ನ ಭವಿಷ್ಯತಿ

ಸಂಪುಟ 29 ಮಾರ್ಚ್ 1999 ಸಂಚಿಕೆ-10



❋ ❋ ❋

ಮುಖಚಿತ್ರ ಶ್ರೀ ಸೀತಾ ರಾಮ ಲಕ್ಷ್ಮಣರು - ಚಿತ್ರ - ನಾರಾಯಣಗಿರಿ ದತ್ತು
ಹಿಂಬದಿಯಲ್ಲಿ ಶ್ರೀ ಕೋದಂಡ ರಾಮಸ್ವಾಮಿ ದೇವಾಲಯ - ತಿರುಪತಿ.




ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ
ಎಲ್ಲ ತಿ ತಿ ದೇ
ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು.

**ಬಿಡಿ ಪ್ರತಿ 4-00**
**ವಾರ್ಷಿಕ ಚಂದಾ 48-00**




ಸುದ್ದಿ ಸಂಗತಿ ಸ್ಫೋಟದ ಹೊತ್ತು ಈ ಇಪ್ಪತ್ತನೆಯ ಶತಮಾನದ ಕೊನೆಯ ವರ್ಷದಲ್ಲಿ ಸಮಷ್ಟಿಯ ಆರೋಗ್ಯಕ್ಕೆ ಶಾಂತಿ ಸೌಹಾರ್ದಕ್ಕೆ ವ್ಯಕ್ತಿಯ ಕಾಣಿಕೆಗೆ ಎಷ್ಟು ಬೆಲೆ ಎಂಬುದು ಸಹಜವಾದ ಪ್ರಶ್ನೆಯಾಗುತ್ತದೆ ಒಂದು ಪ್ರಶ್ನೆಯ ಎಲ್ಲ ಮಗ್ಗುಲುಗಳನ್ನು, ಒಂದು ಕೊರತೆಯ ಎಲ್ಲ ಕೋಣಗಳನ್ನು ಬಿಚ್ಚಿ ತೋರಿಸಬಲ್ಲ ಹಲವಾರು ವಾದಗಳು ಮೊದಲೇ ಇದ್ದವಾದರೂ ಸುದ್ದಿ ಸಿಡಿತ (ಇನ್‌ಫರ್‌ಮೇಷನ್ ಎಕ್ಸ್‌ಪ್ಲೋಷನ್) ಮಾಹಿತಿರಾಜಮಾರ್ಗಗಳೂ ವಿಪರೀತವಾಗುತ್ತಿರುವ ಈ ಹೊಸ ವಾತಾವರಣದಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ಶಕ್ತ್ಯನುಸಾರ ವಂತಿಗೆಯನ್ನು ಸಲ್ಲಿಸುತ್ತ ಬಂದಾಗಲೇ ಸಮಾಜದ ಐಹಿಕ ಆಧ್ಯಾತ್ಮಿಕ ದಾಹಗಳ ದಣಿವು ತೀರಿ, ತೃಪ್ತಿ, ಸಹನೆ, ಸುಖಗಳು ಹರಡಲು ನೆರವಾಗುತ್ತದೆ ಎಂಬುದನ್ನು ಯಾರಾದರೂ ಒಪ್ಪದೇಕು

ಪ್ರಶ್ನೆ - ಪ್ರತಿಯೊಬ್ಬರ ಕಾಣಿಕೆಯದಲ್ಲ;ಕಾಣ್ಕೆಯದು ವಂತಿಗೆಯನ್ನು ನೀಡುವಲ್ಲಿ ಒಂದು ದಿಶಾನಿರ್ದೇಶವಿರದೇಕು ಒಬ್ಬೊಬ್ಬರ ಪರಿಕಲ್ಪನೆಯೂ ವಿಭಿನ್ನ ರೀತಿಯದಾದಾಗ ಸುಖದ ದಾರಿಗೂ ಈ ರುಚಿಭೇದ ಅಂಟಿಕೊಂಡು ದಾರಿ ಬೇರೆಯಾಗುತ್ತದೆ ಸೌಹಾರ್ದ ಮೃಗ್ಯವಾಗುತ್ತದೆ. ಅಂತಲ್ಲಿ ಎಲ್ಲರನ್ನೂ ಒಂದು ದಿಕ್ಕಿನತ್ತ ಸೆಳೆಯುವ, ಎಲ್ಲ ಶಕ್ತಿಗಳನ್ನೂ ಒಂದು ಕೇಂದ್ರದತ್ತ ಆಕರ್ಷಿಸುವ ಚುಂಬಕ ಶಕ್ತಿಯ ಅಗತ್ಯ ಅನಿವಾರ್ಯವಾಗುತ್ತದೆ ಎಂತಲೇ 'ಅಭಯಂ ಸರ್ವ ಭೂತೇಭ್ಯೋ ದದಾಮ್ಯೇ ತದ್ ವ್ರತಂ ಮಮ' ಎಂದು ಘೋಷಿಸುವ ರಾಮಚಂದ್ರ ಪ್ರಸ್ತುತವಾಗುತ್ತಾನೆ

ತನ್ನ ನಡಾವಳಿಯಿಂದ - ಅದರ ವಿವಿಧ ಮಗ್ಗುಲುಗಳನ್ನು ಹಲವರು ಪ್ರಶ್ನಿಸಿದರೂ ಕೂಡ - ರಾಮಚಂದ್ರ ಮನುಕುಲಕ್ಕೆ ದಾರಿದೀಪವಾಗಿ ಕೈಹಿಡಿದು ನಡೆಸುವ ಹಿರಿಯಣ್ಣನಾಗಿ ಕಂಡುಬರುತ್ತಾನೆ ಎಂಬುದು ಮುಖ್ಯ ಆತ ತಂದೆತಾಯಿಯರಲ್ಲಿಟ್ಟ ಭಕ್ತಿ, ವಶಿಷ್ಠ ವಿಶ್ವಾಮಿತ್ರರಲ್ಲಿನ ಶಿಷ್ಯತ್ವ, ತಮ್ಮಂದಿರಲ್ಲಿಟ್ಟ ವಾತ್ಸಲ್ಯ ವಿಭೀಷಣ ಹನುಮಂತ ಸುಗ್ರೀವರಲ್ಲಿಟ್ಟ ಸ್ನೇಹ, ಸೀತೆಯಲ್ಲಿಟ್ಟ ಪತಿಪ್ರೇಮ - ಎಲ್ಲಕ್ಕೂ ಮಿಗಿಲಾಗಿ ಧರ್ಮದಲ್ಲಿನ ಅವಿರತ ಅಕುಂಠಿತ ಶ್ರದ್ಧೆ ಗೌರವಗಳು - ಸೆಳೆಯುತ್ತವೆ

ಸೀತಾಮನೋಹರನಾದ ಶ್ರೀರಾಮಚಂದ್ರ ಎಷ್ಟೇ ಆದರೂ ದೇವ ಪುರುಷ, ದೇವರೇ ಧರೆಗಿಳಿದು ಬಂದಾಗ ಮಾತ್ರ ಕಂಡುಬಂದ ಒಂದು ಅತಿಶಯ ಅವನನ್ನು ಅನುಕರಿಸುವುದು, ಅನುಸರಿಸುವುದು, ಅನ್ನಗತ ಪ್ರಾಣರಾದ,ಅಲಘುಗಳಾದ ನಮ್ಮ ಅಳವೇ ಎಂದು ಕೈಚೆಲ್ಲಿ ಕುಳಿತುಬಿಡುವುದು ಅಥವಾ ಜಾನಾಮಿ ಧರ್ಮಂ ನ ಚ ಮೇ ಪ್ರವೃತ್ತಿಃ ಎಂದು ಸೋಲನ್ನು ಮೊದಲೇ ಒಪ್ಪಿ ನಡೆಯುವುದು ಉಂಟಾದರೂ ಅದರಿಂದ ಪ್ರಯೋಜನವೇನಿಲ್ಲವೆಂಬುದನ್ನೂ ತಿಳಿಯದೇಕು ನಮ್ಮ ವಂತಿಗೆಯನ್ನು ನಾವು ಸಲ್ಲಿಸಲು ಹೆಸರು ಕರೆವಾಗ ನಡೆಯಲು ಸಿದ್ಧರಾಗಿ ನಿಲ್ಲುವಲ್ಲಿಯೇ ರಾಮ ಜೀವನ ನಮ್ಮ ನೆರವಿಗೆ ಬರುವಂತಹುದು

ಈ ಹಿನ್ನೆಲೆಯಲ್ಲಿ ಶ್ರೀರಾಮ ನವಮಿಯ ದಿನ ಚಿತ್ರ ಹುತ್ತ ಕಟ್ಟಿರಿ ಗೆದ್ದಲು ಹಿಡಿಯುವುದು ಬೇಡ ಪುರುಷೋತ್ತಮನ ಆ ಅಂಥ ರೂಪರೇಖೆ ಪ್ರತಿ ಮನದಲ್ಲಿ ಮೂಡಿ ಬರಲೆಂದು ಬೇಡುವ

ಪ್ರಾತಃ ಸ್ಮರಾಮಿ ರಘುನಾಥ ಮುಖಾರ ವಿಂದಂ
ಮಂದಸ್ಮಿತಂ ಮದುರಭಾಷಿ ವಿಶಾಲ ಫಾಲಂ
ಕರ್ಣಾವಲಂಬಿ ಚಲಕುಂಡಲ ಶೋಭಿ ಗಂಡಂ
ಕರ್ಣಾಂತ ದೀರ್ಘ ನಯನಂ ನಯನಾಭಿರಾಮಮ್



# ವಾಲ್ಮೀಕಿ ಹಾಗೂ ತೊರವೆ ರಾಮಾಯಣ

**ಕಂದಾಡೈ ಕೇಶವನ್**

ವಾಲ್ಮೀಕಿ ರಾಮಾಯಣವು ಸಂಸ್ಕೃತ ಸಾಹಿತ್ಯದಲ್ಲಿ ಮೊದಲನೆಯ ಕಾವ್ಯವೆನಿಸಿಕೊಂಡು ಅದರ ಕವಿ ಮುಂದೆ ಬಂದ ಎಲ್ಲಾ ಕವಿಗಳಿಗೆ ಸ್ಫೂರ್ತಿಯನ್ನಿತ್ತು ಆದಿಕವಿ ವಾಲ್ಮೀಕಿ ಎಂದೇ ಪ್ರಸಿದ್ಧಿಯನ್ನು ಹೊಂದಿದನು ಸಂಸ್ಕೃತದಲ್ಲಿ ಅದ್ಭುತ ರಾಮಾಯಣ, ಆನಂದರಾಮಾಯಣ, ಆಧ್ಯಾತ್ಮರಾಮಾಯಣ, ವಾಸಿಷ್ಠ ರಾಮಾಯಣ, ಶೇಷರಾಮಾಯಣ, ತತ್ವಸಂಗ್ರಹ ರಾಮಾಯಣ ಮತ್ತು ಮಹಾರಾಮಾಯಣಗಳಿವೆ ಮೂಲರಾಮಾಯಣಕ್ಕೆ ಮನಸೋತು ಬೌದ್ಧರೂ ಹಾಗೂ ಜೈನರೂ ಕೂಡ ತಮ್ಮ ಮತಕ್ಕೆ ಅನುಸಾರವಾಗಿ ರಾಮಾಯಣಗಳನ್ನು ರಚಿಸಿದ್ದಾರೆ ಬೌದ್ಧ ರಾಮಾಯಣಗಳು ದಶರಧಜಾತಕ, ದಶರಧ ಕಥನಮ್, ದಶರಧ ಜಾತಕಗದ್ಯ ಮತ್ತು ಅನಾಮಕಮ್ ಜಾತಕಮ್ ಪ್ರಮುಖವಾದವು. ಜೈನ ರಾಮಾಯಣ ಪರಂಪರೆಯಲ್ಲಿ ವಿಮಲ ಸೂರಿಯ "ರಾಮಚರಿಯ," ಪಂಪರಾಮಾಯಣ, ಗುಣ ಭದ್ರಾಚಾರ್ಯನ ಉತ್ತರ ಪುರಾಣ ಮುಖ್ಯವಾದವು. ಜೈನ ರಾಮಾಯಣ ಕಥೆಯನ್ನು ಮೊದಲು ಆದಿ ತೀರ್ಥಂಕರನಾದ ಪುರುದೇವನು ತನ್ನ ಮಗನಾದ ಭರತ ಚಕ್ರವರ್ತಿಗೆ ತಿಳಿಸಿದನೆಂದು ಜೈನರ ನಂಬಿಕೆ ಕನ್ನಡದಲ್ಲಿ ತರುವಾಯ ನಾಗಚಂದ್ರನ ಪಂಪರಾಮಾಯಣವು, ಕುಮುದೇಂದುವಿನ ರಾಮಾಯಣ, ರಾಮವಿಜಯಚರಿತೆ, ರಾಮಕಥಾವತಾರ ಮುಂತಾದವು ಕೂಡ ಜಿನ ರಾಮಾಯಣಗಳು ಆದಿಕಾವ್ಯ ರಾಮಾಯಣದ ಧಾಟಿಯಲ್ಲಿ ಅದನ್ನು ಕನ್ನಡಕ್ಕೆ ಕಾವ್ಯವಾಗಿ ತಂದ ಭಾಗ್ಯ ಕವಿ ಕುಮಾರವಾಲ್ಮೀಕಿಗೆ ಸಲ್ಲುತ್ತದೆ

ತೊರವೆ ರಾಮಾಯಣವು ಭಾಮಿನಿ ಷಟ್ಪದಿ ಛಂದಸ್ಸಿನ ೫೧೦೩ ಪದ್ಯಗಳು ಈ ಕೃತಿಯು ನರಹರಿ ಕವಿಯಿಂದ ೬ ಕಾಂಡಗಳಿಂದ, ೧೧೨ ಸಂಧಿಗಳಿಂದ ರಚಿತವಾಗಿದೆ ಪ್ರತಿ ಸಂಧಿಯ ಕೊನೆಯಲ್ಲಿ ತನ್ನ ನಾಮಾಂಕಿತವನ್ನು "ತೊರವೆಯ ನರಹರಿ" ಎಂದು ಬಳಸಿದ್ದಾನೆ ತೊರವೆ ನರಹರಿಯ ಭಕ್ತ, ಕುಮಾರ ವಾಲ್ಮೀಕಿಯ ಕನ್ನಡ ರಾಮಾಯಣವು ತೊರವೆ ರಾಮಾಯಣವೆಂದೇ ಪ್ರಸಿದ್ಧಿಯನ್ನು ಹೊಂದಿ ಜನಪ್ರಿಯವಾದ ಕಾವ್ಯವಾಗಿದೆ ವಾಲ್ಮೀಕಿ ರಾಮಾಯಣ ಹಾಗೂ ತೊರವೆ ರಾಮಾಯಣಗಳ ಕಥೆಯಲ್ಲಿನ ಮುಖ್ಯ ಘಟನೆಗಳು ಒಂದೇ ಆದರೂ ಸೂಕ್ಷ್ಮ ವಿವರಣೆಗಳಲ್ಲಿ ಸಂದರ್ಭ ಸನ್ನಿವೇಶಗಳಲ್ಲಿ ನರಹರಿಯ ಪಾತ್ರರಚನಾ ಕೌಶಲವು, ಧರ್ಮದೃಷ್ಟಿ ಪ್ರೋಷಣೆ ಮನೋಹರವಾಗಿದೆ ಗದುಗಿನ ವೀರನಾರಾಯಣನ ಭಕ್ತನಾದ ನಾರಾಯಣಪ್ಪ ಮೊತ್ತಮೊದಲಿಗೆ ಕನ್ನಡದ ಭಾರತ ಕಥಾಮಂಜರಿಯನ್ನು ರಚಿಸಿ ಕುಮಾರವ್ಯಾಸನೆಂದು ಹೇಗೆ ಪ್ರಸಿದ್ಧಿಯನ್ನು ಹೊಂದಿದನೋ ಹಾಗೆಯೇ ತೊರವೆ ಗ್ರಾಮದ ನರಹರಿ ಎಂಬ ಒಬ್ಬ ಸ್ಮಾರ್ತ ಬ್ರಾಹ್ಮಣನು ಕನ್ನಡದಲ್ಲಿ ರಾಮಾಯಣವನ್ನು ರಚಿಸಿ ಕುಮಾರವಾಲ್ಮೀಕಿಯೆಂದೇ ಪ್ರಸಿದ್ಧನಾದನು ಗದುಗಿನ ನಾರಾಯಣಪ್ಪ ತನ್ನ ಆರಾಧ್ಯದೇವತೆ ವೀರನಾರಾಯಣನನ್ನು ನೆನೆಸಿ ಕಾವ್ಯ ಪ್ರಾರಂಭಮಾಡುವ ಪದ್ಯ-

ಶ್ರೀ ವನಿತೆಯರಸನೆ ವಿಮಲ ರಾ  
ಜೀವ ಪೀಠನ ಪಿತನೆ ಜಗಕತಿ  
ಪಾವನನೆ ಸನಕಾದಿ ಸಜ್ಜನ ನಿಕರ ದಾತಾ ರ  
ರಾವಣಾಸುರ ಮಥನ ಶ್ರವಣ ಸು  
ಧಾ ವಿನೂತನ ಕಥನ ಕಾರಣ  
ಕಾವುದಾನತಜನರ ಗದುಗಿನವೀರನಾರಯಣ

ಕುಮಾರ ವಾಲ್ಮೀಕಿ ರಾಮಾಯಣವನ್ನು ಹೇಳುವಾಗಣ ಆರಂಭದ ಪದ್ಯ ಹೀಗಿದೆ



ಶ್ರೀ ಜನಕಜಾರಮಣ ವಿಮಲ ಸ
ರೋಜ ಸಂಭವಜನಕನನುಪಮ
ರಾಜಶೇಖರವಿನುತ
ನಿಖಿಲಾಮರಕಿರೀಟ ಚಯ
ರಾಜಿ ತಾಮಲ ಲಲಿತ ಪದ ಪಂ
ಕೇಜನಾನತ ಜನ ದಯಾಸುರ
ಭೂಜ ತೊರವೆಯ ರಾಯ
ನರಹರಿ ಪಾಲಿಸುಗೆ ಜನವ

ಇಬ್ಬರು ಕವಿಗಳು ತಮ್ಮ ಆರಾಧ್ಯದೇವತೆಗಳನ್ನು ಹೊಗಳುವಾಗ ವಿಮಲ ಎಂಬ ಪದಗಳನ್ನೇ ಉಪಯೋಗಿಸಿರುವುದು ಕುಮಾರವ್ಯಾಸ ಜನವ ಪೊರೆ ಎಂದರೆ ಕುಮಾರವಾಲ್ಮೀಕಿ ಪಾಲಿಸು ಜನವ ಎಂಬುವುದಾಗಿ ಪ್ರಾರ್ಥಿಸಿಕೊಂಡಿದ್ದಾನೆ ಹತ್ತನೆಯ ಪದ್ಯದಲ್ಲಿ ಕುಮಾರವಾಲ್ಮೀಕಿ ಆದಿಕವಿ ವಾಲ್ಮೀಕಿಯನ್ನು ಕವಿರಾಜಹಂಸನೆಂದೂ, ಆದಿಕವಿ ಕಮಲ ಮಿತ್ರ, ರಘುವರನ ಕಥಾಸಾಗರದಲ್ಲಿ ತೇಲಿದ ಮಹಾಮುನಿ ಇತ್ಯಾದಿಯಾಗಿ ಹೊಗಳುವಿಕೆ ಯಥಾಟಿ ಎಷ್ಟು ಚೆಂದ. ಅನುಪಮ-

ಆದಿಕವಿ ಕವಿರಾಜ ಹಂಸನ
ನಾದಿಕವಿ ಕುಲ ಕಮಲ ಮಿತ್ರನ
ಹಾಡಿವೌಕಪ್ರಚುರ ಭಾಷಾ
ಕವಿ ಜನೋತ್ತಂಸ
ವೇದಗರ್ಭ ವರಪ್ರಸಾದಾ
ಹ್ಲಾದಕವಿ ರಘುವರ ಕಥಾವಿಮ
ಲೋದಧೀಂದು ಮಹಾಮುನಿ
ಪ್ರಾಚೇತಸಂ ವಂದೇ

ವಾಲ್ಮೀಕಿ ರಾಮಾಯಣದಲ್ಲಿ ನಾವು ಕಾಣುವ ಮಾನವೀಯ ಅಂತರಂಗದ ಸಹಜ ಸುಖ ದುಃಖಗಳ ಚಿತ್ರಣ, ವೈವಿಧ್ಯತೆ, ನಿವಾರಿಸಲಾಗದ ಜೀವನ ದ್ವಂದ್ವಗಳನ್ನೂ ಎದುರಿಸುವ ಪಾತ್ರಗಳಿದ್ದರೆ, ತೊರವೆ ರಾಮಾಯಣದಲ್ಲಿನ ಪಾತ್ರಗಳು ಶ್ರೀರಾಮನ ದಿವ್ಯ ಲೀಲಾಮಾನುಷವಿಗ್ರಹದ ಸುತ್ತ ತಿರುಗಾಡುವ ಸೂತ್ರದ ಬೊಂಬೆಗಳು ಉದಾಹರಣೆಗೆ ಮಂದರೆ ರಾಮನ ಅವತಾರಕ್ಕೆ ನೆರವಾಗಲು ಬಂದ ಮಾಯಾವತಾರಿಣಿ ಕುಮಾರ ವಾಲ್ಮೀಕಿಯ ಬಣ್ಣನೆ-

ಮಾಯೆ ಮಂಥರೆಯಾಗಿ ದಶರಥ
ರಾಯ ಭವನವ ಸಾರಿದಳು ಫಣಿ
ರಾಯ ಲಕ್ಷ್ಮಣನಾಗಿ
ಜನಿಸಿದ ಸಿಂದಿರಾವನಿತೆ
ರಾಯ ಜನಕನ ಮಗಳೆನಿಸಿ ವಸು
ಧಾಯುವತಿ ಯಿಂದುದಿಸಿದಳು ನಾ
ರಾಯಣನು ಉದಿಸಿದನನುಪಮ
ರಾಮ ನಾಮದಲಿ

ಇದು ರಾಮಾವತಾರದ ಘಟ್ಟದ ವರ್ಣನೆ ಮಂದರೆಯಾಗಿ ಮಾಯೆಯು, ಶೇಷನು ಲಕ್ಷ್ಮಣನಾಗಿ, ಲಕ್ಷ್ಮೀದೇವಿಯು ಸೀತೆಯಾಗಿ ಜನಕನ ಮಗಳಾಗಿ ನಾರಾಯಣನು ರಾಮನಾಗಿ ಜನಿಸಿದರು ಎಂಬುವುದಾಗಿ ನರಹರಿಯು ರಾಮನೇ ಶ್ರೀಮನ್ನಾರಾಯಣನೆಂದು ಬಣ್ಣಿಸಿದ್ದಾನೆ ರಾಮ ಮಹಾವಿಷ್ಣುವಿನ ಅವತಾರವೆಂದು ನಂಬಿ ಅವನನ್ನು ಅಂದಿನಿಂದ ಇಂದಿನವರೆಗೂ ಪೂಜಿಸುವ ಸಂಪ್ರದಾಯ ನಮ್ಮಲ್ಲಿ ಬೆಳೆದುಬಂದಿದೆ ರಾಮಾಯಣವು ಭಗವಂತನನ್ನು ಕುರಿತ ಪವಿತ್ರಗ್ರಂಥ ಅದನ್ನು ಪೂಜಿಸಿ ಪಾರಾಯಣ ಮಾಡುವುದರಿಂದ ಐಹಿಕ ಮತ್ತು ಪಾರಮಾರ್ಥಿಕ ಫಲಗಳನ್ನು ಪಡೆಯಬಹುದು ಎಂಬ ದೃಢನಂಬಿಕೆ ವಿಶ್ವಾಸ ಎಲ್ಲಾ ಭಾರತೀಯರಿಗೆ ಆದ್ದರಿಂದಲೇ ಕವಿ ಪೀಠಿಕೆಯಲ್ಲಿ ರಾಮಚರಿತೆಯನ್ನು ಕುರಿತು

...... ರಾಘವೇಂದ್ರನ
ಚರಿತ ಶತಕೋಟಿ ಪ್ರವಿಸ್ತರ
ವರ ಮಹಾ ಚಾರಿತ್ರ
ರಚನಾ ಸುಪ್ರಬಂದದಲಿ
ಪರಮ ಭಕ್ತಿ ಯೊಳಾವನೊಂದ
ಕ್ಷರವ ಕೇಳ್ದಾನವಗೆ ಪಾತಕ

-ಹರಿವುದೆಂದು ಕುಮಾರರಿಗೆ (ಲವ ಕುಶರಿಗೆ) ವಾಲ್ಮೀಕಿ ಮುನಿ ನುಡಿದ ರಾಮಾಯಣವು ವೇದದ ಸಾರ ವೇದವೇದ್ಯನಾದ ಪರಮ ಪುರುಷೋತ್ತಮನೇ ದಶರಥಮಗನಾಗಿ ರಾಮನಾಗಿ ದಿವಿಯಲ್ಲಿ ಅವತಾರಮಾಡಿದ - ವೇದವೂ ವಾಲ್ಮೀಕಿಯಿಂದ ರಾಮಾಯಣವಾಗಿ ಮೂರ್ತಿ ಗೊಂಡಿತು

ವೇದ ವೇದ್ಯೆ ಪರೇ ಪುಂಸಿ
ಜಾತೇ ದಶರಥಾತ್ಮಜೇ
ವೇದಃ ಪ್ರಾಚೇತಸಾದಾಸೀತ್
ಸಾಕ್ಷಾತ್ ರಾಮಾಯಣಾತ್ಮನಾ

-ಇದೇ ಭಾವವನ್ನು ಕುಮಾರವಾಲ್ಮೀಕಿ

ಮುದವನಿಹದಲಿ ಕೊಡುವುದ ಚ್ಯುತ
ಪದವ ಪರದೊಳಗೀವುದಿದು
ನಿಗಮದ ರಹಸ್ಯ ಪುರಾಣಕಥೆ
ಮಿಗಿಲೆಂದು ಮುನಿನುಡಿದ

- ಎಂಬುವುದಾಗಿ ಪೀಠಿಕಾಸಂಧಿ ಸಮಾಪ್ತಿ ಮಾಡುತ್ತಾನೆ ಎರಡನೆಯ ಸಂಧಿಯಲ್ಲಿ ಕೈಲಾಸದಲ್ಲಿ ಸತಿ ಗೌರಿಗೆ ಶಿವನು ರಾಮನಾಮವೆಂಬ ಬೀಜಾಕ್ಷರವನ್ನು ಅನುಗ್ರಹಿಸಿ ಶ್ರೀರಾಮನಾಮದ ಮಹಿಮೆ ಹೇಳುವಾಗ, ಶಿವನು-

ಶ್ರೀರಾಮರಾಮ ರಾಮೇತಿ
ರಮೇ ರಾಮೇ ಮನೋರಮೇ
ಸಹಸ್ರನಾಮ ತತ್ತುಲ್ಯಂ
ರಾಮ ನಾಮ ವರಾನನೇ

-ಎಲೈ ದೇವಿಯೇ ಸದಾ ಮನಸ್ಸಿನಲ್ಲಿ ಶ್ರೀರಾಮನಾಮ ಜಪಿಸಿದರೆ ಸಾಕು ಯಾವ ಸಹಸ್ರ ನಾಮಗಳನ್ನು ಹೇಳಿಕೊಂಡರೂ ರಾಮನಾಮಕ್ಕೆ ಸಮಾನವಾಗಲಾರದು - ಎಂಬುವ ಭಾವವನ್ನೇ ನರಹರಿ ತೊರವೆ ರಾಮಾಯಣದಲ್ಲಿ ರಾಮನಾಮ ಮಹಿಮೆಯನ್ನು ಹೀಗೆಂದು ಸ್ತುತಿಸಿದ್ದಾನೆ-

ಗಿರಿಜೆ ಕೇಳು ಸಹಸ್ರನಾಮದ
ಸರಿಕಣಾ ರಘುರಾಮಚಂದ್ರನ
ಪರಮ ಮಂಗಳ ನಾಮ
ನಿರುಪಮ ನಿಗಮ ವಿಶ್ರಾಮ
ನಿರುತವಿದು ನಿಜವೆಂದು ಬಗೆ ನಿ
ರ್ಧರಿಸಿದೆವು ನಿಗಮಾರ್ಥದಲಿ ನಿನ
ಗುರು ತರಾನುಗ್ರಹದ
ಬೀಜಾಕ್ಷರ ವಿದೀಗೆಂದ

ಈ ರಾಮ ತಾರಕ ಮಂತ್ರದ ಮಹಿಮೆ ಗಿರಿಜೆಗೆ ಶಿವನು ವಿಸ್ತಾರವಾಗಿ ಹೇಳಿ ಆ ತಾರಕನಾಮದಿಂದ ಆ ವಿಷ್ಣುವಿನ ನಾಮವನು ಕೇಳಿದೊಡೆ ಸಾವು ಜನ್ಮಾದಿಗಳು ತೊಲಗುವದಾಖಿಲ ಜನಗಳಿಗೆ ಎಂಬುವುದಾಗಿ ತಿಳಿಸುತ್ತಾನೆ ಈ ಪ್ರಸಂಗವು ವಾಲ್ಮೀಕಿ ರಾಮಾಯಣದಲ್ಲಿ ಇಲ್ಲ ಬಹುಶಃ ನರಹರಿಯು ಶಿವ ಪಾರ್ವತಿಯರ ವೃತ್ತಾಂತಗಳನ್ನು ಬ್ರಹ್ಮಪುರಾಣದ ಅಧ್ಯಾತ್ಮರಾಮಾಯಣದ ಶಿವನ ಹೇಳಿಕೆ-

ರಾಮಃ ಪರಾತ್ಮಾ ಪ್ರಕೃತೇ
ರನಾದಿರಾನಂದ ಏಕಃ ಪುರುಷೋತ್ತಮೋಹಿ

-ಎಂಬುವ ಘಟ್ಟದಿಂದಲೂ, ಆನಂದ ರಾಮಾಯಣದಲ್ಲಿ ಶಿವನು ಹೇಳುವ-

ಕಥಯಾಮಿ ಸವಿಸ್ತಾರಂ
ಮಹಾ ಮಂಗಲಕಾರಕಂ

-ಎಂಬುವ ಪ್ರಸಂಗವನ್ನು ಅನುಸರಿಸಿ ಶ್ರೀರಾಮನ ವಿಷ್ಣು ಸರ್ವೋತ್ತಮತ್ವವನ್ನು ತನ್ನ ಕಾವ್ಯದಲ್ಲಿ ನರಹರಿ ಪ್ರತಿಪಾದಿಸಿದ್ದಾನೆ

## ವಾಲ್ಮೀಕಿ ಹಾಗೂ ಕುಮಾರವಾಲ್ಮೀಕಿ ಕಥಾ ನಿರೂಪಣೆಗಳು

ವಾಲ್ಮೀಕಿ ರಾಮಾಯಣದಲ್ಲಿ ಬೇಡನಿಂದ ಹತವಾದ ಕಾಮಮೋಹಿತ ಗಂಡು ಕ್ರೌಂಚ ಪಕ್ಷಿಯ ವಿಷಯವಾಗಿ ಪರಿತಪಿಸುವ ಹೆಣ್ಣು ಕ್ರೌಂಚ ಪಕ್ಷಿಯ ದುಃಖವನ್ನು ಕಂಡು ಕನಿಕರಿಸಿ ಕವಿ ವಾಲ್ಮೀಕಿ "ಮಾನಿ

ಪಾದ ಪ್ರತಿಷ್ಠಾಂ ತ್ವಮಗಮಶ್ಶಾಶ್ವತೀಸ್ಸಮಾಃ" ಹೇನಿಷಾದ ಕಾಮ ಮೋಹಿತ ಕ್ರೌಂಚ ಪಕ್ಷಿಯನ್ನು ನಿಷ್ಕಾರಣವಾಗಿ ಕೊಂದ ನೀನು ಅನೇಕ ವರ್ಷ ಅಪಕೀರ್ತಿ ಹೊಂದುವಿ ಎಂಬುವ ಶಾಪದ ವೃತ್ತಾಂತ ತೊರವೆ ರಾಮಾಯಣದಲ್ಲಿ "ಮನದಲಿ ನೊಂದು ನಯನದೊಳೊಸಗಿ ಸೂಸಿದವ ಶ್ರುಧಾರೆಗಳು .. ಶೋಕಿಸಿದನಾಮುನಿನಾಥ ಮರುಕದಲ್ಲಿ" ಆದಿಕವಿ ವಾಲ್ಮೀಕಿ ತಾನು ರಚಿಸಿದ ರಾಮಾಯಣವನ್ನು ರಾಮನ ಪುತ್ರರಾದ ಲವಕುಶರಿಂದ ಸುಶ್ರಾವ್ಯವಾಗಿ ಮದುರವಾಗಿ ಹಾಡುವಂತೆ ಕಲಿಸಿ. ಅದನ್ನು ಅಯೋಧ್ಯೆಯಲ್ಲಿ ರಾಮನ ಆಸ್ಥಾನದಲ್ಲಿ ಹಾಡಿಸಿದರೆ ಕುಮಾರವಾಲ್ಮೀಕಿ ಆಶ್ರಮದಲ್ಲಿ ತಮ್ಮ ತಂದೆ ಯಾರು? ತಮ್ಮ ವಂಶ ಯಾವುದು? ಎಂಬುವುದಾಗಿ ಕೇಳಿದಾಗ ಸ್ವತಃ ವಾಲ್ಮೀಕಿಯೇ ರಾಮಾಯಣ ಕಥೆಯನ್ನು ಮಕ್ಕಳಿಗೆ ವಿಸ್ತಾರವಾಗಿ ಹೇಳುತ್ತಾನೆ

ತಂದೆಯಾರೆಮ್ಮನ್ವಯ ವದೇ
ನೆಂದು ಬಿನ್ನಹ ಮಾಡೆ ಮುನಿ ಸಾ
ನಂದದಲಿ ಹೇಳಲಿಕೆ
ತೊಡಗಿದನೀ ಮಹಾಕಥೆಯ

ವಾಲ್ಮೀಕಿಯು ಮಂಥರೆಯನ್ನು ತನ್ನ ರಾಮಾಯಣದಲ್ಲಿ ಕೈಕೇಯಿಗೆ ಬೋಧನೆ ಮಾಡಿ ರಾಮನ ವನವಾಸಕ್ಕೆ ಕಾರಣವಾದ ಅಂಶವನ್ನು ನರಹರಿಯು ಮಾಯೆಯ ಅವತಾರ ಮಂಥರೆಯು ಎಂಬುವುದಾಗಿ ನಿರ್ಣಯಿಸಿದ್ದಾನೆ ರಾಮನ ಅವತಾರ ಕಾರಣಕ್ಕಾಗಿ ಅವಳ ಜನನ ರಾವಣನ ಸಂಹಾರಕ್ಕಾಗಿ ನಿಮಿತ್ತಳಾದಳು ಮಂಥರೆಯ ವಿಷಯವಾಗಿ ಅಗ್ನಿಪುರಾಣದಲ್ಲಿ ರಾಮನ ಕಾಲನ್ನು ಎಳೆದಿದ್ದರಿಂದ ಅವಳು ರಾಮನಿಂದ ಶಿಕ್ಷಿತಳಾದಳು ಆದ್ದರಿಂದ ರಾಮನ ಮೇಲೆ ವೈರತ್ವ ಬೆಳೆಯಿತು ಕ್ಷೇಮೇಂದ್ರನ ರಾಮಾಯಣ ಕಥಾಮಂಜರಿಯಲ್ಲೂ ಇದೇ ಉಲ್ಲೇಖನೆ "ಶೈಶವೇ ಕಿಲ ರಾಮೇಣ ಪುರಾ ಪ್ರಣಯ ಕೋಪಿತಃ ಚರಣೇ ನಾಹತಾ ತತ್ರ ಚರಂ ಕೋಪಮುವಾಹ" ಎಂಬುವುದಾಗಿ ಮಹಾಭಾರತ ಪ್ರಕಾರ ಬ್ರಹ್ಮನ ಶಾಪದಿಂದ ಗಂಧರ್ವ ಹೆಣ್ಣು ಕುಬ್ಜ ರೂಪ ತಾಳಿ ಮಂಥರೆಯಾಗುತ್ತಾಳೆ (ಮಂಥರಾ ಮಾನುಷೇ ಲೋಕೇ ಕುಬ್ಜಾ ಸುಮಭವತ್ ತದಾ) ಕಂಬ ರಾಮಾಯಣದಲ್ಲಿ ಶ್ರೀರಾಮನು ಬಾಲ್ಯದಲ್ಲಿ ವಿನೋದದಿಂದ ಮಣ್ಣಿನ ಉಂಡೆಯನ್ನು ಮಂಥರೆ ಮೇಲೆ ಎಸೆದಿದ್ದಕ್ಕೆ ಅವನ ಮೇಲೆ ವೈರತ್ವವನ್ನು ಸಾಧಿಸಿಕೊಂಡಳು - ಇತ್ಯಾದಿ ಆಧ್ಯಾತ್ಮ ರಾಮಾಯಣದಲ್ಲಿ ಹಾಗೂ ಚಂಪೂರಾಮಾಯಣದಲ್ಲಿ ಶ್ರೀರಾಮನ ಪಟ್ಟಾಭಿಷೇಕವನ್ನು ತಿಳಿದ ದೇವತೆಗಳು ಸರಸ್ವತಿಯನ್ನು ಪ್ರಾರ್ಥಿಸಿ ಮಂಥರೆಯನ್ನು ಪ್ರವೇಶಿಸುವಂತೆ ಪ್ರಾರ್ಥಿಸಿಕೊಂಡಾಗ ಆಕೆಯಲ್ಲಿ ಆವೇಶಗೊಂಡು ರಾಮನ ವನವಾಸಕ್ಕೆ ಕಾರಣಭೂತಳಾಗುತ್ತಾಳೆ

## ಅಹಲ್ಯೋದ್ಧಾರ

ಅಹಲ್ಯೆ ಗೌತಮ ಋಷಿಯ ಪತ್ನಿ ಅತಿರೂಪವತಿ ಸೌಂದರ್ಯಮಯಿ ಆಕೆಯ ಸೌಂದರ್ಯಕ್ಕೆ ಮರುಳಾಗಿ ದೇವೇಂದ್ರನು ಅವಳ ಮೇಲೆ ಮೋಹಗೊಂಡನು ಗೌತಮರು ಪ್ರಾಥಃ ಸ್ನಾನಕ್ಕೆ ಹೋದಾಗ ಮೋಸದಿಂದ ಗೌತಮರ ವೇಷ ಧರಿಸಿಬಂದ ಆಕೆಯು ಬಂದಿರುವವನ - ವಶವರ್ತಿನಿಯಾಗಿ ನಡೆದುಕೊಂಡಳು ಅಷ್ಟರಲ್ಲಿ ಅಲ್ಲಿಗೆ ಬಂದ ಗೌತಮರು ಇಂದ್ರನನ್ನು ಕುರಿತು "ಯೋನಿಲಂಪಟ ದುಷ್ಪಾತ್ಮನ್ ಸಹಸ್ರ ಭಗವಾನ್ ಭವ" ಶರೀರವೆಲ್ಲ ಸಹಸ್ರಯೋನಿಗಳಾಗುವಂತೆ ಶಾಪಕೊಟ್ಟ, ಅಪಚಾರಮಾಡಿದ ಹೆಂಡತಿಗೆ "ಇಹ ವರ್ಷ ಸಹಸ್ರಾಣಿ ಬಹೂನಿತ್ವಂ ನಿವತ್ಸ್ಯಸಿ" ಅನೇಕ ಸಹಸ್ರ ವರ್ಷಗಳು ವಾಯುಭಕ್ಷಣದಿಂದ ನಿರಾಹಾರಿಯಾಗಿ ಯಾರ ಕಣ್ಣಿಗೂ ಕಾಣದಂತೆ, ಶ್ರೀರಾಮನು ಬರುವವರೆಗೂ ಪರಿತಪಿಸುವಂತೆ ಶಾಪ ಕೊಟ್ಟ. ಶ್ರೀರಾಮನು ಸೀತಾ ಕಲ್ಯಾಣಕ್ಕಾಗಿ ಮಿಥಿಲೆಗೆ ಬರುವಾಗ ವಿಶ್ವಾಮಿತ್ರರು ಗೌತಮಾಶ್ರಮವನ್ನು ತೋರಿಸಿ, ಗೌತಮ ಅಹಲ್ಯೆಯರ ವೃತ್ತಾಂತವನ್ನು ತಿಳಿಸಿ ಅಹಲ್ಯೆಯನ್ನು ಉದ್ಧಾರಮಾಡುವಂತೆ ಸೂಚಿಸಲು ರಾಮನ ದೃಷ್ಟಿ ಮಾತ್ರದಿಂದಲೇ ಆಕೆ ತನ್ನ ಹಿಂದಿನ ರೂಪತಾಳಿದಳು ಎಂಬುವುದಾಗಿ ವಾಲ್ಮೀಕಿ ರಾಮಾಯಣವು ತಿಳಿಸಲು ನರಹರಿಯು ತನ್ನ ತೊರವೆ ರಾಮಾಯಣದಲ್ಲಿ ಅಹಲ್ಯೆಯನ್ನು



ಶಾಪಗ್ರಸ್ಥಳಾದ ಶಿಲೆಯಾಗಿ ಚಿತ್ರಿಸಿ, ಶ್ರೀರಾಮನ ಚರಣವು ಶಿಲೆಗೆ ತಾಕಿದ ತಕ್ಷಣ ಆಕೆ ಶಾಪಮುಕ್ತಳಾಗಿ ಸ್ತ್ರೀರೂಪ ತಾಳಿದಾಗ ಗೌತಮರ ಆಗಮನ ಪುನರ್ಮಿಲನ. ವಾಲ್ಮೀಕಿರಾಮಾಯಣದಲ್ಲಿ ಶ್ರೀರಾಮನ ದೃಷ್ಟಿ ಮಾತ್ರದಿಂದಲೇ ಅಹಲ್ಯೆಯ ಶಾಪವಿಮೋಚನೆ ಆಗ ಶ್ರೀರಾಮನು ಅಹಲ್ಯೆಗೆ ನಮಸ್ಕರಿಸುತ್ತಾನೆ ಆದರೆ ತೊರವೆ ರಾಮಾಯಣದಲ್ಲಿ ಅಹಲ್ಯೆಯೇ ಶ್ರೀರಾಮನನ್ನು ವಂದಿಸುತ್ತಾಳೆ ಕವಿ ತನ್ನ ಕಾವ್ಯದಲ್ಲಿ-

ಧರಿಸಿದಳು ನಿಜತನುವನಾ ಪ್ರ
ಸ್ತರವಿದೀಗಾ ಸತಿಯೆನುತ ಹ
ತ್ತಿರಕೆ ಬರೆ ರಾಮಾಂಘ್ರಿ
ರಜವಾವರಿಸಿತಾ ಶಿಲೆಯ
ನರವಿನೋದ ವಿಚಿತ್ರ ಲೀಲಾ
ಚರಿತ ವಿಷ್ಣು ತ್ರಾಹಿ ವಿಶ್ವಂ
ಭರ ಭವಾರಿ ತ್ರಾಹಿ ಸರ್ವೇಶ್ವರ ಶಿವತ್ರಾಹಿ
ಕ್ಷರ ರಹಿತ ನಕ್ಷಯನ ನಾಹತ
ಹರ ವಿರಿಂಚಾತ್ಮಕ ಪರಾಪರ
ಪರಮ ಗುಣನಿಧಿ ಜಯ
ಜಯೆಂದೆರಗಿದಳು ಚರಣದಲಿ

ಅಧ್ಯಾತ್ಮ ರಾಮಾಯಣದಲ್ಲಿ ಬರುವ ಕಥಾಕ್ರಮವನ್ನೇ ನರಹರಿಯು ಅನುಕರಣೆ ಮಾಡಿದ್ದಾನೆ. ಅಧ್ಯಾತ್ಮರಾಮಾಯಣದಲ್ಲಿ ಶ್ರೀರಾಮನ ಪಾದಸ್ಪರ್ಶದಿಂದ ಪುನೀತಳಾದ ಅಹಲ್ಯೆ ಅವನನ್ನು ಪ್ರತ್ಯಕ್ಷವಾಗಿ ಪೂಜೆಮಾಡುವ ಸುಯೋಗ ತನ್ನ ಪೂರ್ವ ಪುಣ್ಯ ವಿಶೇಷ ಯಾವ ಮಹಾವಿಷ್ಣುವಿನ ಪಾದ ಕಮಲದಲ್ಲಿ ಹುಟ್ಟಿ ಬ್ರಹ್ಮರುದ್ರಾದಿಗಳನ್ನು ಪವಿತ್ರಗೊಳಿಸುವ ಭಾಗೀರಥೀ ಶ್ರೀರಾಮನ ಪಾದಕಮಲಗಳಲ್ಲಿ ಇದ್ದಾಳೆಂದು ಭಕ್ತಿಯಿಂದ ಆಕೆ ರಾಮನನ್ನು ಪೂಜಿಸುತ್ತಾಳೆ

ನಿನ್ನ ಪದ ದರು ಶನದ ಭಾಗ್ಯವು
ತನ್ನೊಳಾದುದು ಘನ ಮಹಿಮ
ನಮೋ ಯೆನುತ ಕೈಮುಗಿದಿರ್ದಳಾ ಕಾಂತೆ

## ರಾವಣನಿಗೆ ಶ್ರೀರಾಮನ ವಿಶ್ವರೂಪದರ್ಶನ

ಸ್ವತಃ ತಮ್ಮನಾದ ವಿಭೀಷನ ಬುದ್ಧಿವಾದವನ್ನು ಕೇಳದ ರಾವಣ ಸೀತೆಯನ್ನು ರಾಮನಿಗೆ ಹಿಂತಿರುಗಿಸಲು ಮನ ಕೊಡಲಿಲ್ಲ ತನ್ನ ಧರ್ಮಪತ್ನಿ ಮಂಡೋದರಿಯ ಮಾತನ್ನೂ ಕೇಳದ ರಾವಣ ರಾಮನೊಡನೆ ಯುದ್ಧಮಾಡಿ ಸೋತು ಲಂಕೆಗೆ ಹಿಂತಿರುಗಿ ನಾನು ಬ್ರಹ್ಮನಿಂದ ವರವನ್ನು ಪಡೆದಾಗ ಸುರಾಸುರ ಗರುಡ ಗಂಧರ್ವ ಯಕ್ಷ ರಾಕ್ಷಸರಿಂದ ಸಾವಿಲ್ಲದ ವರವನ್ನು ಪಡೆದೆನೇ ಹೊರತು "ಮಾನುಷೇಭ್ಯೋ ನಯಾಚಿತಂ" ಮನುಷ್ಯರಿಂದ ಮಾತ್ರ ಸಾವಿಲ್ಲದ ವರವನ್ನು ಕೇಳಲಿಲ್ಲ ಎಂಬುವುದಾಗಿ ಚಿಂತಿಸುತ್ತಾ ಕುಳಿತ ಸನ್ನಿವೇಶವನ್ನು ವಾಲ್ಮೀಕಿ ಸೃಷ್ಟಿ ಮಾಡಿದ್ದಾನೆ ಹಿಂದೆ ಇಕ್ಷ್ವಾಕುವಂಶದ ಅನರಣ್ಯ ಶಾಪ, ಹಿಂದೆ ವೇದವತಿಯನ್ನು ತಾನು ಪೀಡಿಸಿದಾಗ ಕೊಟ್ಟ ಶಾಪ. ನಂದಿಕೇಶ್ವರನ ಶಾಪ.ಈತನ ಸ್ಮೃತಿಗೆ ಬಂದು ರಾವಣನನ್ನು ಕಾಡಿತು ಇದು ವಾಲ್ಮೀಕಿಯ ಸೃಷ್ಟಿ ಆದರೆ ತೊರವೆಯ ನರಹರಿ ತನ್ನ ಹೆಂಡತಿ ಮಂಡೋದರಿಗೆ ರಾಮನು ವಿಷ್ಣುವೆಂದೂ, ಸೀತೆಯು ಲಕ್ಷ್ಮಿಯೆಂದೂ, ತಾನು ಬಲ್ಲೆ ಲಕ್ಷ್ಮಿಯೆಂದು ತಿಳಿದೇ ಸೀತೆಯನ್ನು ಬಲಾತ್ಕಾರವಾಗಿ ಕದ್ದೆ ಇದರ ಫಲ ರಾಮನಿಂದ ತನಗೆ ಮರಣ ಮತ್ತು ಮೋಕ್ಷಪ್ರಾಪ್ತಿ ಎಂಬುವ ಆಧ್ಯಾತ್ಮರಾಮಾಯಣ ಹಾಗೂ ಆನಂದ ರಾಮಾಯಣಗಳ ಉಲ್ಲೇಖನೆಗಳನ್ನೇ ಕವಿ ಅಳವಡಿಸಿಕೊಂಡು ತನ್ನ ಕಾವ್ಯದಲ್ಲಿ-

ಬಲ್ಲೆ ನೀ ರಘುನಾಥ ಲಕ್ಷ್ಮೀ
ವಲ್ಲಭನು ತಾನೆಂಬುದನು ನಾ
ಬಲ್ಲೆನವನಿಜೆ ಲಕ್ಷ್ಮಿ ಯೆಂಬುದನಾಹವಕೆ ನೆರೆದ
ಭಲ್ಲುಕರು ಮರ್ಕಟರು ಸುರರೆಂ
ದೆಲ್ಲ ವೇತಕೆ ಕೇಳು ರಣಮುಖ
ದಲ್ಲಿ ರಾಮನ ಕೂಡುವುದು ಸಂಕಲ್ಪ ತನಗೆಂದ

ಈ ವಿಷಯವನ್ನೇ ಆಧ್ಯಾತ್ಮರಾಮಾಯಣದಲ್ಲಿ 'ವಿಷ್ಣುಂ ಮನ್ಯಾಮಹೇ ರಾಮಂ ಮಾನುಷಂ ರೂಪಮಾಸ್ಥಿತಂ' ಎಂಬುವುದಾಗಿಯೂ ಹನುಮನ್ನಾಟಕದಲ್ಲೂ ಕೂಡ ತಾಯಿಗೆ ರಾವಣನು ಸೀತೆಯನ್ನು ರಾಮನಿಗೆ ಸಮರ್ಪಿಸಲಾರೆ ಎಂಬುವುದಾಗಿ ಹೇಳುವಾಗ-

ಜಾನಾಮಿ ಸೀತಾಂ ಜನಕ ಪ್ರಸೂತಾಂ
ಜಾನಾಮಿ ರಾಮಂ ಮಧುಸೂದನಂ ಚ
ವಧಂ ಚ ಜಾನಾಮಿ ನಿಜದಶಾಸ್ಯಃ
ತಥಾಪಿ ಸೀತಾಂ ನ ಸಮರ್ಪಯಾಮಿ

ಎಂಬುವುದರ ಛಾಯೆ ತೊರವೆ ರಾಮಾಯಣದಲ್ಲಿ ನಾವು ಕಾಣಬಹುದು ರಾಮರಾವಣರ ಯುದ್ಧದಲ್ಲಿ ಶ್ರೀರಾಮನ ವಿಶ್ವರೂಪದರ್ಶನ ಭಾಗ್ಯವನ್ನು ಪಡೆದಾಗ ಅವನಲ್ಲಿದ್ದ ದ್ವೇಷವು ಭಕ್ತಿರೂಪವಾಗಿ ಹರಿದು ಬಂದಾಗ ಕವಿಯ ವಾಣಿ-

ಸುಖಮಯನ ಚಿನ್ಮಯನ ಬಹಿ
ರ್ಮುಖ ಕಿರೀಟ ನಖ ಪ್ರಭಾಂಜಿತ
ನಖಿನ ಪರಮೇಶ್ವರನ
ಪರಾಪರನಾ ಪರಾತ್ಮಕನ
ಶಿಖಿ ಸುಧಾಕರ ಸಕಲ ಸಂಭವ
ಸಖ ಮಯೂಖ ಸಹಸ್ರ ತೇಜೋ
ಮುಖನ ರಘುರಾಜೇಂದ್ರ
ಚಂದ್ರನ ಕಂಡನಸುರೇಂದ್ರ

ರಾವಣನಿಗೆ ಆಗ ಅರಿವಾಯಿತು "ಲೋ ಮೂರರೊಳೇತಕಂಜಿಕೆ ನಮಗೆ ಮುಕ್ತಿಯ ಸೂ ತನಗೆಂದ" ಎಂಬುವುದಾಗಿ ನರಹರಿ ವರ್ಣಿಸಿದ್ದಾನ ರಾವಣನೂ ಕೂಡ ಭಕ್ತಿಯ ಪರವಶತೆಯಲಿ-

ಶ್ರೀ ನೃಸಿಂಹ ನೃಸಿಂಹ ಮಾಯಾ
ಮಾನುಷ ವ್ಯಾಪಾರಸಾರ ಕೃ
ಪಾನಿಧಿಯೇ ಶರಣೆನುತ
ಬಲು ದನಿಷ್ಯೋರಿ ಬೊಬ್ಬಿರಿದ

ಎಂಬುವುದಾಗಿ ನರಹರಿಯು ರಾಮನ ವಿಶ್ವರೂಪದರ್ಶನವನ್ನು ಪಡೆದ ರಾವಣನನ್ನು ಚಿತ್ರಿಸಿದ್ದಾನೆ.

* * *

### ಧ್ವನಿವರ್ಧಕಗಳ ವಿತರಣೆ

**ಹೈಂದವ ದೇವಾಲಯಗಳಿಗೆ ಕಾರ್ಯಕ್ರಮ ಪ್ರಸ್ತಾರಕ್ಕಾಗಿ ರಿಯಾಯಿತಿ ದರಗಳಲ್ಲಿ ನೀಡುವ ಧ್ವನಿವರ್ಧಕಗಳ ಬೆಲೆಯನ್ನು ರೂ 3480/- ಎಂದು ನಿರ್ಧರಿಸಲಾಗಿದೆ. ಹರಿಜನ ವಾಡೆಗಳಲ್ಲಿರುವ ಎಸ್.ಟಿ, ಎಸ್.ಸಿ. ದೇವಾಲಯಗಳಿಗೆ ಈ ದರ ರೂ. 700/- ಆಗಿದ್ದು ಈ ದರಗಳು ಈಗ ಜಾರಿಯಲ್ಲಿವೆ**

**ಆಲಯಗಳಿಗಾಗಿ ಧ್ವನಿವರ್ಧಕಗಳನ್ನು ಬಯಸುವವರು ಸ್ಥಳೀಯ ಮುಜರಾಯಿ ಇಲಾಖಾ ಅಸಿಸ್ಟೆಂಟ್ ಕಮಿಷನರ್ ಅವರ ಮೂಲಕ ಅಭ್ಯರ್ಥನೆಗಳನ್ನು ಕಾರ್ಯನಿರ್ವಹಣಾಧಿಕಾರಿ ತಿ ತಿ ದೇ ತಿರುಪತಿ ಇವರಿಗೆ ಕಳುಹಿಸಬೇಕು.**

**ತಿ.ತಿ.ದೇ.**

# ಸಪ್ತಸರ್ಗಿ ರಾಮಾಯಣ

- ಕೆ. ಎಸ್. ಶ್ರೀವತ್ಸ

ಶ್ರೀಮದ್ ರಾಮಾಯಣವು ಆದಿ ಕಾವ್ಯವಾಗಿದ್ದು ಅತ್ಯಂತ ಪುರಾತನವಾದ ಆರ್ಷೇಯ ಗ್ರಂಥವಾಗಿದೆ ಶ್ರೀ ರಾಮಾಯಣದ ನಿತ್ಯ ಪಾರಾಯಣವು ಬಹಳ ಶ್ರೇಯಸ್ಕರವೆಂದು ಹಿಂದಿನಿಂದಲೂ ಹಿಂದೂಗಳು ನಂಬಿಕೊಂಡು ಬಂದಿದ್ದಾರೆ ರಾಮಾಯಣವು ಕೇವಲ ಸೀತಾರಾಮರ ಕಥೆಯಾಗದೆ, ಅದು ನೀತಿಶಾಸ್ತ್ರ, ಧರ್ಮಶಾಸ್ತ್ರ, ರಾಜನೀತಿಶಾಸ್ತ್ರ ಮತ್ತು ಮೋಕ್ಷ ಶಾಸ್ತ್ರದ ಗ್ರಂಥವೂ ಆಗಿದೆ

ಶ್ರೀಮದ್ ರಾಮಾಯಣದ ನಿತ್ಯ ಪಾರಾಯಣ ಕ್ರಮವು ಅನೇಕ ರೀತಿಯದಾಗಿದ್ದು, ಅದರಲ್ಲಿ ಸಪ್ತ ಸರ್ಗಿ ಪಾರಾಯಣ ಕ್ರಮವು ವಿಶೇಷವಾದದ್ದೆಂದು ಅನೇಕ ಹಿರಿಯರ ಅಭಿಮತ ಪ್ರತಿನಿತ್ಯ ಏಳೇಳು ಸರ್ಗದಂತೆ ಪಾರಾಯಣ ಮಾಡಿದಲ್ಲಿ, ಏಳು ಬಾರಿ ಮಂಡಲ ಪೂರ್ತಿ ಮಾಡಬಹುದು ರಾಮಾಯಣದಲ್ಲಿ ಬಾಲಕಾಂಡದಿಂದ ಯುದ್ಧಕಾಂಡದವರೆಗೆ ಒಟ್ಟು ೫೩೭ ಸರ್ಗಗಳಿವೆ ಉತ್ತರ ಶ್ರೀರಾಮಾಯಣವನ್ನೂ ಸೇರಿಸಿದಲ್ಲಿ ಒಟ್ಟು ೬೪೮ ಸರ್ಗಗಳಾಗುತ್ತವೆ ಆದರೆ ಸಾಮಾನ್ಯವಾಗಿ ಯುದ್ಧಕಾಂಡದ ಅಂತ್ಯದಲ್ಲಿ ಶ್ರೀರಾಮಪಟ್ಟಾಭಿಷೇಕದ ಸರ್ಗವಿರುವುದರಿಂದ ರಾಮಾಯಣವು ಅಲ್ಲಿಗೆ ಮುಕ್ತಾಯ ಎಂದು ಕೆಲವರ ಅಭಿಪ್ರಾಯ ೫೩೭ ಸರ್ಗಗಳ ಸಪ್ತಸರ್ಗಿ ಪಾರಾಯಣ ಕ್ರಮವನ್ನು ಈ ಕೆಳಕಂಡಂತೆ ಮಾಡಬಹುದು

ಏಳು ಸರ್ಗಗಳಂತೆ ಪ್ರತಿನಿತ್ಯ ಪಾರಾಯಣ ಮಾಡಿದಲ್ಲಿ ೭೬ ದಿನಗಳಲ್ಲಿ ೫೩೨ ಸರ್ಗಗಳನ್ನು ಓದಿ, ಬಾಕಿ ೫ ಸರ್ಗಗಳನ್ನು ಮತ್ತೆ ಬಾಲಕಾಂಡದ ೨ ಸರ್ಗಗಳನ್ನು ಸೇರಿಸಿ ಪ್ರಾರಂಭ ಮಾಡಿದಲ್ಲಿ ೭೭ ದಿನಗಳಲ್ಲಿ ೫೩೪ ಸರ್ಗಗಳನ್ನೂ ಓದಿ ಮುಗಿಸಿ, ಬಾಕಿ ಉಳಿಯುವ ೩ ಸರ್ಗಗಳನ್ನು ೭೮ ದಿನಕ್ಕೆ ಸೇರಿಸಿಕೊಂಡು, ಪುನಃ ಪ್ರಾರಂಭಿಸಿದಲ್ಲಿ, ಮೂರನೇ ಬಾರಿ ೭೭ ದಿನಗಳಲ್ಲಿ ೫೩೧ ಸರ್ಗಗಳನ್ನು ಓದಬಹುದು ಬಾಕಿ ಉಳಿಯುವ ೧ ಸರ್ಗವನ್ನು ೭೮ ದಿನಕ್ಕೆ ಸೇರಿಸಿಕೊಂಡು ೪ ನೇ ಬಾರಿಗೆ ಓದಲು ಪ್ರಾರಂಭಿಸಬಹುದು ೪ ನೇ ಬಾರಿಯಲ್ಲಿ ೭೬ ದಿನಕ್ಕೆ ೫೩೨ ಸರ್ಗಗಳನ್ನು ಓದಿ, ಬಾಕಿ ಉಳಿದ ೬ ಸರ್ಗಗಳನ್ನು ೫ ನೇ ಬಾರಿಯ ಪಾರಾಯಣಕ್ಕೆ ಸೇರಿಸಿಕೊಂಡಲ್ಲಿ ಒಟ್ಟು ೫೪೩ ಸರ್ಗಗಳಾಗಿ, ಸಪ್ತಸರ್ಗಿ ಪಾರಾಯಣದಂತೆ ೭೭ ದಿನಗಳಲ್ಲಿ ೫೩೯ ಸರ್ಗಗಳನ್ನು ಓದಿ, ಬಾಕಿ ನಾಲ್ಕು ಸರ್ಗಗಳನ್ನು ೬ನೇ ಬಾರಿಯ ಪಾರಾಯಣಕ್ಕೆ ಸೇರಿಸಿಕೊಂಡಲ್ಲಿ ೫೪೧ ಸರ್ಗಗಳಾಗುತ್ತವೆ ೬ನೇ ಸಲ ೭ ಸರ್ಗಗಳಂತೆ ಪ್ರತಿನಿತ್ಯ ಪಾರಾಯಣ ಮಾಡಿದಲ್ಲಿ, ಮತ್ತೆ ೭೭ ದಿನಗಳಲ್ಲಿ ೫೩೫ ಸರ್ಗಗಳನ್ನು ಓದಿ ಬಾಕಿ ಉಳಿದ ೨ ಸರ್ಗಗಳನ್ನು ೭ನೇ ಬಾರಿ (ಕೊನೆಯ ಬಾರಿ)ಯ ಪಾರಾಯಣಕ್ಕೆ ಸೇರಿಸಿಕೊಂಡರೆ ೫೩೯ ಸರ್ಗಗಳಾಗಿ ೭೭ ದಿನಗಳಲ್ಲಿ ೭ ಸರ್ಗಗಳಂತೆ ಓದಿ, ಶ್ರೀರಾಮಪಟ್ಟಾಭಿಷೇಕದ ಸರ್ಗಕ್ಕೆ(ಯುದ್ಧಕಾಂಡದ ಕೊನೆಯ ಸರ್ಗ)ಕ್ಕೆ ಮುಗಿಯುತ್ತದೆ ಹೀಗೆ ೭ ಬಾರಿ ಶ್ರೀ ರಾಮಾಯಣವನ್ನು ಓದಿ ಮಹಾಪಟ್ಟಾಭಿಷೇಕ ಮಾಡಬಹುದು

ಈ ಮೇಲಿನ ಸೂತ್ರವನ್ನು ಬಾಲಕಾಂಡದಿಂದ ಉತ್ತರಕಾಂಡದವೆಗೆ ಇರುವ ಒಟ್ಟು ೬೪೮ ಸರ್ಗಗಳಿಗೂ ಅನ್ವಯಿಸಿದಲ್ಲಿ, ಆಗಲೂ ಸಹ ೬೪೮ ದಿನಗಳಲ್ಲಿ ಪ್ರತಿನಿತ್ಯ ೭ ಸರ್ಗಗಳಂತೆ ೭ ಬಾರಿ ಓದಿ ಮುಗಿಸಬಹುದು ಅಷ್ಟೇ ಅಲ್ಲದೆ ಶ್ರೀಮದ್‌ರಾಯಾಯಣದ ಪ್ರತಿಯೊಂದೂ ಕಾಂಡ ಪಾರಾಯಣಕ್ಕೂ ಪ್ರತ್ಯೇಕವಾಗಿಯೂ ಈ ಸೂತ್ರ ಅನ್ವಯವಾಗುತ್ತದೆ ಬಾಲಕಾಂಡದಲ್ಲಿ ೭೭ ಸರ್ಗಗಳಿದ್ದು ೭

ಪಟ್ಟಿಯನ್ನು ಗಮನಿಸಿದಲ್ಲಿ ಮೇಲಿನ ಕ್ರಮ ಸ್ಪಷ್ಟವಾಗುತ್ತದೆ

**ಒಟ್ಟು ಸರ್ಗಗಳು 537**

ಮೊದಲನೆಯ ಬಾರಿ 537÷7 = 76 ದಿನಗಳು ಶೇಷ 5 ಸರ್ಗಗಳು

ಎರಡನೆಯ ಬಾರಿ 537+5=542÷7 = 77 ದಿನಗಳು ಶೇಷ 3 ಸರ್ಗ

ಮೂರನೆಯ ಬಾರಿ 537+3=540÷7 = 77 ದಿನಗಳು ಶೇಷ 1 ಸರ್ಗ

ನಾಲ್ಕನಯ ಬಾರಿ 537+1=538÷ = 76 ದಿನಗಳು ಶೇಷ 6 ಸರ್ಗ

ಐದನಯ ಬಾರಿ 537+6=543÷7 = 77 ದಿನಗಳು ಶೇಷ 4 ಸರ್ಗ

ಆರನಯ ಬಾರಿ 537+4=541÷7 = 77 ದಿನಗಳು ಶೇಷ 2 ಸರ್ಗ

ಏಳನೆಯ ಬಾರಿ 537+2=539÷7 = 77 ದಿನಗಳು ಶೇಷ ಏನೂ ಇಲ್ಲ

ಒಟ್ಟು 537 ದಿನಗಳಲ್ಲಿ, (ರಾಮಾಯಣದ ಒಟ್ಟು ಸರ್ಗಗಳ ಸಂಖ್ಯೆ) 7 ಬಾರಿ, ಪ್ರತಿ ನಿತ್ಯ 7 ಸರ್ಗಗಳಂತೆ ಓದಿ ಮುಗಿಸಬಹುದು

# ಶ್ರೀ ಕಲ್ಯಾಣವೆಂಕಟೇಶ್ವರಸ್ವಾಮಿ ದೇವಾಲಯ
## ಶ್ರೀನಿವಾಸ ಮಂಗಾಪುರ

# ನೂತನ ಆರ್ಜಿತ ಸೇವೆಗಳು

ದಿನೇ ದಿನೇ ಹೆಚ್ಚುತ್ತಿರುವ ಭಕ್ತರ ಸಂದಣಿಯ ಅಪೇಕ್ಷೆಯಂತೆ ಶ್ರೀನಿವಾಸ ಮಂಗಾಪುರದ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ಎರಡು ಹೊಸ ಸೇವೆಗಳನ್ನು ಪ್ರವೇಶಗೊಳಿಸಲಾಗಿದೆ. ಅವುಗಳೆಂದರೆ -

## 1. ಶ್ರೀನಿವಾಸ ಅರ್ಚನಾ ದತ್ತಿಯೋಜನೆ :

ಹತ್ತು ವರ್ಷ ಕಾಲ ರೂ. 5000/- ದತ್ತಿ ನೀಡುವವರ ಅಪೇಕ್ಷೆಯ ದಿನದಂದು ವರ್ಷಕ್ಕೆ ಒಮ್ಮೆ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿಗೆ ಅರ್ಚನೆ ಮಾಡುವ ಅವಕಾಶ. ಈ ಹಣವನ್ನು ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಠೇವಣಿಯಿಡಲಾಗುವುದು

* ಈ ಸೇವೆಯಲ್ಲಿ ವ್ಯಕ್ತಿ, ಸಂಘ, ಸಂಸ್ಥೆಯ ಹೆಸರಿನಲ್ಲಿ ಅರ್ಚನೆ ನಡೆಸಬಹುದು.
* ದತ್ತಿ ನೀಡುವವರಿಗೆ ಅರ್ಚನೆಯ ದಿನವನ್ನು ನಿರ್ಧರಿಸುವ ಅವಕಾಶವಿದೆ.
* ದತ್ತಿ ನೀಡುವವರ ವರ್ಷಕ್ಕೆ ಒಮ್ಮೆ ಆಯ್ಕೆಯ ದಿನದಂದು ಅವರ ಕುಟುಂಬದ ಐದುಮಂದಿಗೆ ಅಷ್ಟೋತ್ತರ ಸಹಸ್ರನಾಮಾರ್ಚನೆಯ ವೇಳೆಯಲ್ಲಿ ಉಚಿತ ದರ್ಶನ ವುಂಟು.
* ಈ ಯೋಜನೆಯನ್ವಯ ದತ್ತಿ ನೀಡುವವರಿಗೆ ಒಂದು ಅಂಗವಸ್ತ್ರ ಒಂದು ಕುಪ್ಪಸದ ಕಣದ ಬಹುಮಾನವುಂಟು
* ಈ ದತ್ತಿಯನ್ವಯ ಅರ್ಚನಸೇವೆ ಹತ್ತು ವರ್ಷಕ್ಕೆ ಸೀಮಿತ

## 2. ಅಭಿಷೇಕಾನಂತರ ವಸ್ತ್ರಾಲಂಕರಣ ಸೇವೆ :

ತಿರುಮಲೆಯಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯ ಶುಕ್ರವಾರಾಭಿಷೇಕದ ನಂತರ ವಸ್ತ್ರಾಲಂಕರಣಕ್ಕಾಗಿ ಭಕ್ತರು ವಸ್ತ್ರಕಾಣಿಕೆ ನೀಡುವುದು ಪದ್ಧತಿ ಈ ದಿನಗಳಲ್ಲಿ ಹೆಚ್ಚಿರುವ ಯಾತ್ರಿಕ ಸಂದಣಿಯಿಂದಾಗಿ ಈ ವಸ್ತ್ರಕಾಣಿಗೆ ನೀಡಬಯಸುವ ಗೃಹಸ್ಥರು ಐದು ವರ್ಷಗಳಿಗೂ ಹೆಚ್ಚುಕಾಲ ಕಾಯಬೇಕಾಗುತ್ತದೆ. ಇಂತಹದೇ ವಸ್ತ್ರಕಾಣಿಕೆಯನ್ನು ಶ್ರೀನಿವಾಸ ಮಂಗಾಪುರದಲ್ಲೂ ಈಗ ಸ್ವೀಕರಿಸಲಾಗುವ ವಸ್ತ್ರಾಲಂಕರಣ ಸೇವೆಯನ್ನು ಪ್ರವೇಶಗೊಳಿಸಲಾಗಿದೆ

* ಈ ಸೇವೆಯಲ್ಲಿ ತಿರುಮಲೆಯಲ್ಲಿಯಂತೆಯೇ ಪ್ರತಿ ಶುಕ್ರವಾರವೂ ಅಭಿಷೇಕಾನಂತರ ಸ್ವಾಮಿಗೆ ನೂತನ ಮೇಲ್ಚಾತ್ ಹಾಗೂ ಉತ್ತರೀಯದಿಂದ ಅಲಂಕರಣ ನಡೆಸಲಾಗುವುದು
* ಭಕ್ತರಿಂದ ಈ ಸೇವೆಗಾಗಿ ವಸ್ತ್ರವನ್ನು (ಮೇಲ್ಚಾತ್ ಹಾಗೂ ಉತ್ತರೀಯ) ಅಥವಾ ಅದರ ಬೆಲೆ ರೂ 15000/- ಸ್ವೀಕರಿಸಲಾಗುವುದು
* ತಿರುಮಲೆಯಲ್ಲಿ ನಂತೆಯೇ ಭಕ್ತರ ಕಡೆಯ ಐದು ಮಂದಿಗೆ ಅಭಿಷೇಕ ದರ್ಶನದ ಏರ್ಪಾಡು ಮಾಡಲಾಗುವುದು
* ಅಭಿಷೇಕಾನಂತರ ಗೃಹಸ್ಥರಿಗೆ ಒಂದು ಅಂಗವಸ್ತ್ರ ಹಾಗೂ ಒಂದು ಕುಪ್ಪಸದ ಕಣವನ್ನು ಬಹೂಕರಿಸಲಾಗುವುದು

ಯಾತ್ರಿಕರು ಶ್ರೀನಿವಾಸ ಮಂಗಾಪುರದ ಶ್ರೀ ಕಲ್ಯಾಣವೆಂಕಟೇಶ್ವರಸ್ವಾಮಿಯ ಈ ಸೇವೆಗಳಲ್ಲಿ ಭಾಗವಹಿಸಿ ಅನುಕೂಲಗಳನ್ನು ಪಡೆಯಬಹುದಾಗಿದೆ

ತಿ.ತಿ.ದೇ.

ಸರ್ಗಗಳಂತೆ ೧೧೧ ದಿನದಲ್ಲಿ ಓದಿ ಮುಗಿಸಬಹುದು ೭ ಬಾರಿ ಓದಲು ೭೭ ದಿನಗಳು ಬೇಕಾಗುತ್ತವೆ

ಅಯೋಧ್ಯಾಕಾಂಡದಲ್ಲಿ ೧೧೯ ಸರ್ಗಗಳಿದ್ದು, ೧೭ ದಿನಗಳಲ್ಲಿ ೭ ಸರ್ಗಗಳಂತೆ, ೧೧೯ ದಿನಗಳಲ್ಲಿ ೭ ಬಾರಿ ಓದಿ ಮಂಗಳ ಮಾಡಬಹುದು ಅರಣ್ಯಕಾಂಡದಲ್ಲಿ ೭೫ ಸರ್ಗಗಳಿದ್ದು, ಸಪ್ತಸರ್ಗೀ ಪಾರಾಯಣ ಕ್ರಮದಲ್ಲಿ, ೭೫ ದಿನಗಳಲ್ಲಿ ಏಳುಬಾರಿ ಪಾರಾಯಣ ಆಗುತ್ತದೆ

ಕಿಷ್ಕಿಂಧಾಕಾಂಡದ ೬೭ ಸರ್ಗಗಳನ್ನು ೬೭ ದಿನಗಳಲ್ಲಿ ೭ ಬಾರಿ ಪ್ರತಿದಿನ ಏಳೇಳು ಸರ್ಗಗಳಂತೆ ಪರಿಸಬಹುದು ಸುಂದರ ಕಾಂಡವನ್ನು ೬೮ ದಿನಗಳಲ್ಲಿ, ೬೮ ಸರ್ಗಗಳನ್ನು ೭ ಬಾರಿ ಓದಿ ಮಂಗಳ ಮಾಡಬಹುದು

ಇದೇ ರೀತಿ ಯುದ್ಧಕಾಂಡದ ೧೩೧ ಸರ್ಗಗಳನ್ನೂ ಹಾಗೂ ಉತ್ತರಕಾಂಡದ ೧೧೧ ಸರ್ಗಗಳನ್ನು ಸಹ ಕ್ರಮವಾಗಿ ೧೩೧ ದಿನಗಳು ಮತ್ತು ೧೧೧ ದಿನಗಳಲ್ಲಿ ಏಳು ಬಾರಿ ಸಪ್ತಸರ್ಗೀ ಪಾರಾಯಣ ಮಾಡಬಹುದು ಏಳು ಎಂಬ ಸಂಖ್ಯೆ ನಮ್ಮ ಭಾರತೀಯ ಆಧ್ಯಾತ್ಮಿಕ ಪರಂಪರೆಯಲ್ಲಿ ಮಹತ್ವದ ಸ್ಥಾನ ಪಡೆದಿದೆ ಸಪ್ತಋಷಿಗಳು, ಸಪ್ತಲೋಕಗಳು, ಸಪ್ತ ಸಮುದ್ರಗಳು, ಸಪ್ತ ಪುಣ್ಯ ನದಿಗಳೂ (ಗಂಗಾ, ಯಮುನಾ, ಸಿಂಧು, ಸರಸ್ವತಿ, ನರ್ಮದೆ, ಗೋದಾವರಿ, ಕಾವೇರಿ), ಸಪ್ತ ದಿನಗಳು (ಭಾನುವಾರ ದಿಂದ ಶನಿವಾರದ ವರೆಗೆ), ಸಪ್ತ ಮಾತೃಕೆಯರು, ಸಪ್ತಸ್ವರಗಳು ಇತ್ಯಾದಿ ಅಂತೆಯೇ ಆದಿ ಕಾವ್ಯವಾದ ಶ್ರೀರಾಮಾಯಣದಲ್ಲಿ ಏಳು ಕಾಂಡಗಳಿದ್ದು, ಅವುಗಳ ಸಪ್ತ ಸರ್ಗೀ ಪಾರಾಯಣ, ಬಹಳ ಶ್ರೇಷ್ಠ ಹಾಗೂ ಶ್ರೇಯಸ್ಕರವಾದದ್ದು ಜೀವನದಲ್ಲಿ ಒಂದು ಬಾರಿಯಾದರೂ ವಾಲ್ಮೀಕಿ ಮಹರ್ಷಿ ಪ್ರಣೀತವಾದ ಮೂಲ ರಾಮಾಯಣವನ್ನು ಸಪ್ತಸರ್ಗ ಪಾರಾಯಣ ಕ್ರಮದಲ್ಲಿ ಓದಿ ಆನಂದಿಸುವುದು, ಜೀವನ ಸಾರ್ಥಕ್ಯವೆನಿಸುತ್ತದೆ

ಪೂಜ್ಯ ಶ್ರೀ ಡಿ ವಿ ಜಿ ಅವರು ಕನ್ನಡ ರಾಮಾಯಣ ಭಾಷಾಂತರಕ್ಕೆ ಬರೆದಿರುವ ಮುನ್ನುಡಿಯಲ್ಲಿ, "ಶ್ರೀಮದ್‌ರಾಮಾಯಣದ ಪಾರಾಯಣವು ಸಕಲ ಶ್ರೇಯಸ್ಕರಗಳನ್ನೂ ಉಂಟುಮಾಡುವುದೆಂಬ ನಂಬಿಕೆ ಇನ್ನೂ ಉಳಿದಿರುವುದು ಒಂದು ಶುಭ ಸೂಚನೆ ಈ ನಂಬಿಕೆ ಆಧುನಿಕರ ಅತಿ ಬುದ್ಧಿವಂತಿಕೆಯಿಂದ ಹಾಳಾಗದಿರಲಿ" ಎಂದು ಆಶಿಸಿದ್ದಾರೆ





# ವಾಸುದೇವ



ಪು ಶ್ರೀನಿವಾಸ ಭಟ್ಟ

ಭಗವಾನ್ ವೇದವ್ಯಾಸರು ವಿರಚಿಸಿರುವ ಹದಿನೆಂಟು ಮಹಾಪುರಾಣಗಳಲ್ಲಿ, ಬ್ರಹ್ಮಮಹಾಪುರಾಣವು ಅತ್ಯಂತ ಪ್ರಾಚೀನವೂ, ಬೋಧಪ್ರದವೂ, ಹಾಗೂ ಮೋದಪ್ರದವೂ ಆಗಿರುತ್ತದೆ ಇದು ಸಾಕ್ಷಾತ್ ಬ್ರಹ್ಮದೇವರಿಂದ, ಮರೀಚಿಮುನಿಗೆ ಹೇಳಲ್ಪಟ್ಟ ಪುಣ್ಯಕಥಾಭಾಗವಾಗಿದೆ ಇದರಲ್ಲಿ ಅನೇಕ ರೋಚಕ ಕಥೆಗಳಿವೆ ಅವುಗಳಲ್ಲಿ ಒಂದು ಪುರುಷೋತ್ತಮ ಕ್ಷೇತ್ರವೆನಿಸಿದ ದ್ವಾರಕೆಯಲ್ಲಿರುವ ಶ್ರೀ ವಾಸುದೇವ ಮೂರ್ತಿಯ ವೃತ್ತಾಂತ ಪ್ರತಿಮೆಯಲ್ಲಿ ಪರಮಾತ್ಮನನ್ನು ಕಂಡು ಆರಾಧಿಸುವುದು ಸನಾತನ ಸಂಸ್ಕೃತಿಯ ಜೀವಾಳ ಸ್ವಯಂ ಬ್ರಹ್ಮದೇವನೇ ಆರಾಧನೆಗೆಂದು ಶ್ರೀ ವಾಸುದೇವ ಮೂರ್ತಿಯನ್ನು ಶಿಲೆಯಿಂದ ನಿರ್ಮಾಣಮಾಡಿಸಿದ ಕತೆ ಪುರಾಣದ ನೂರೆಪ್ಪತ್ತಾರನೆ ಅಧ್ಯಾಯದಲ್ಲಿದೆ

ಅನಾದಿ ಕಲ್ಪದಲ್ಲಿ ಬ್ರಹ್ಮದೇವರು, ದೇವಶಿಲ್ಪಿ ವಿಶ್ವಕರ್ಮನಿಂದ ವಾಸುದೇವನ ಒಂದು ಶಿಲಾ ಮೂರ್ತಿ ಮಾಡಿಸಬೇಕೆಂದು ಯೋಚಿಸಿದನು ಬ್ರಹ್ಮದೇವನ ಅಪ್ಪಣೆಯಾದೊಡನೆ ವಿಶ್ವಕರ್ಮನು, ತನ್ನ ಅದ್ಭುತ ಕೈಚಳಕದಿಂದ, ವಾಸುದೇವನ ಶಿಲಾ ವಿಗ್ರಹವನ್ನು ನಿರ್ಮಾಣಮಾಡಿದನು ಮೂರ್ತಿಯ ತುಂಬು ತಾವರೆಯಂತಹ ಮುಖ, ವಿಶಾಲವಾದ ಕಣ್ಣುಗಳು, ಶಂಖ, ಚಕ್ರ, ಗದಾ, ಪದ್ಮಗಳನ್ನು ಧರಿಸಿದ ನಾಲ್ಕು ಕೈಗಳು ಎದೆಯಲ್ಲಿ ಶ್ರೀವತ್ಸ ಲಾಂಛನ, ಕೊರಳಲ್ಲಿ ವನಮಾಲೆ, ರತ್ನಖಚಿತ ಕಿರೀಟ, ಹೊಳಪಿನ ಕರ್ಣಕುಂಡಲಗಳು ಆಕರ್ಷಕವಾಗಿ ಕಂಗೊಳಿಸುತ್ತಿದ್ದವು. ಪೀತಾಂಬರವನ್ನು ತೊಡಿಸಿದಂತೆ, ಕಾಣುವ ಮೂರ್ತಿ ಮನಮೋಹಕವಾಗಿತ್ತು ಅದನ್ನು ನೋಡಿದಾಗ ದೇವತೆಗಳಿಗೆ, ಮತ್ತು ಮಾನವರಿಗೆ ಭಕ್ತಿಯು ಉಕ್ಕೇರುವಂತಿತ್ತು ದಾನವರಿಗೆ ಬೀತಿ ಹುಟ್ಟುವಂತಿತ್ತು ಬ್ರಹ್ಮನಿಗೆ ಮೂರ್ತಿಯನ್ನು ನೋಡಿ ಸಂತೋಷವಾಯಿತು ಅವನು ಸರ್ವಾಂಗಸುಂದರಮೂರ್ತಿಯನ್ನು, ಸುಮೇರು ಪರ್ವತಶೃಂಗಾಂಗಣದಲ್ಲಿ, ಶುಭದಿನದಂದು ಪ್ರತಿಷ್ಠೆ ಮಾಡಿಸಿದನು ಅನುದಿನವೂ ಆ ವಾಸುದೇವ ಪ್ರತಿಮೆಯನ್ನು ಪೂಜಿಸುತ್ತಿರುವ ವಾರ್ತೆ ದೇವೇಂದ್ರನಿಗೆ ತಿಳಿಯಿತು ಅವನು ಯಶೋಕಾಂಕ್ಷಿಯಾಗಿ, ತನ್ನವರೊಂದಿಗೆ ಮೇರು ಪರ್ವತಕ್ಕೆ ಬಂದು, ವಾಸುದೇವನನ್ನು ಅರ್ಚಿಸಿದನು. ಇದರಿಂದ ಅವನಿಗೆ ವಿಶಿಷ್ಟಬಲವೂ, ಜಯವೂ, ಲಭ್ಯವಾಯಿತು ಇದರ ಫಲವಾಗಿ ವೃತ್ರಾಸುರ, ನಮುಚಿ, ಮೊದಲಾದ ಅನೇಕ ದಾನವರನ್ನು ಪರಾಜಯಗೊಳಿಸಿದನು ಇಂತಹ ಮಹಿಮಾನ್ವಿತ ಮೂರ್ತಿಯನ್ನು ದಿನನಿತ್ಯ ಪೂಜಿಸಿ, ಪ್ರಸಾದ ಸ್ವೀಕರಿಸಬೇಕೆಂಬ ಹಂಬಲ, ಸುರಪಾಲನ ಮನಸ್ಸಿನಲ್ಲಿ ಉದ್ಭವಿಸಿತು ಈ ವಿಚಾರವನ್ನು ಬ್ರಹ್ಮದೇವನಲ್ಲಿ ವಿನಯಾನ್ವಿತನಾಗಿ ಬಿನ್ನವಿಸಿಕೊಂಡನು ಬ್ರಹ್ಮದೇವನ ಒಪ್ಪಿಗೆ ಪಡೆದು, ವಾಸುದೇವ ಮೂರ್ತಿಯನ್ನು, ವೈಭವದಿಂದ ಕೊಂಡುಹೋಗಿ, ಅಮರಾವತಿಯ ಅರಮನೆಯ, ಸಮೀಪ ಪ್ರತಿಷ್ಠೆಮಾಡಿದನು ಆ ದೇವರನ್ನು ಅನವರತ ಪೂಜಿಸಿ ಕೃತಾರ್ಥನಾದನು ಕಾಲಾಂತರದಲ್ಲಿ ಲಂಕೇಶ್ವರ ರಾವಣನು ವರಬಲಾನ್ವಿತನಾಗಿ, ಸ್ವರ್ಗಲೋಕವನ್ನು ಅತಿಕ್ರಮಿಸುವನು ಇಂದ್ರಾದಿ ಸುಮನಸರನ್ನು ಸೋಲಿಸಿ, ಸಂಚಾರಸ್ವೈರ, ಅರಮನೆ ಬಳಿ ಮಂದಿರದಲ್ಲಿದ್ದ ಅನಂತ ವಾಸುದೇವ ಮೂರ್ತಿಯನ್ನು ಕಂಡನು ದಶಕಂಠನು ಹರಿದ್ವೇಷಿಯಾದರೂ, ಆ ಮೂರ್ತಿಯ ಚೆಲುವು ಅವನ ಮನಸೆಳೆಯಿತು ಸುರಲೋಕದ ಚತುರ್ದಶ ರತ್ನಗಳಲ್ಲಿ ಒಂದನ್ನೂ ಅವನು ಲಂಕೆಗೆ ತರಲಿಲ್ಲ ಆದರೆ ಮೂರ್ತಿಯನ್ನು ಪುಷ್ಪಕ ವಿಮಾನದಲ್ಲಿರಿಸಿಕೊಂಡು ಲಂಕೆಗೆ ಕೊಂಡುಹೋಗುವನು. ಅವನು ಅದರ ಅಂದ ಚಂದಕ್ಕೆ ಮರುಳಾದನಲ್ಲದೆ, ವಾಸುದೇವನ ಬಗ್ಗೆ ಯಾವುದೇ ಭಕ್ತಿ, ವಿಶ್ವಾಸಗಳು ಅವನಿಗಿರಲಿಲ್ಲ

ಲಂಕೆಯಲ್ಲಿ ಹರಿಚರಣಕಿಂಕರನಾದ ರಾವಣಾನುಜ ವಿಭೀಷಣನು, ಆ ಪ್ರತಿಮೆಯನ್ನು ಕಂಡು, ಭಕ್ತಿಯಿಂದ ತಲೆಬಾಗುವನು ಅವನು ಅಣ್ಣನಿಗೆ ವಂದಿಸಿ, ಆ ವಿಗ್ರಹವನ್ನು ತನಗೆ ಕೊಡಬೇಕೆಂದು ಕೇಳಿಕೊಂಡನು ತಾನು ಪರಶಿವ ಭಕ್ತ ವಿಗ್ರಹ ನಿರ್ಮಾಣ ಕೌಶಲಕ್ಕೆ ಮಾತ್ರ, ಮೆಚ್ಚಿ ಇದನ್ನು ತಂದದ್ದು ಯಾವ ಕಾಲಕ್ಕೂ ಅದನ್ನು ಪೂಜಿಸುವ ಅಥವಾ ಭಕ್ತಿಭಾವದಿಂದ ಕಾಣುವವ ತಾನಲ್ಲ ಎಂದು ಯೋಚಿಸಿ ರಾವಣನು ಅದನ್ನು ತಮ್ಮನಿಗೊಪ್ಪಿಸಿದನು ಅವನು ವಾಸುದೇವನ ದಿವ್ಯಮೂರ್ತಿಯನ್ನು ಸ್ವಗೃಹದಲ್ಲಿಟ್ಟು ಶುದ್ಧಾಂತಃಕರಣದಿಂದ ಪೂಜಿಸಿದನು ಪರಮಾತ್ಮನ ಪರಮಾನುಗ್ರಹದಿಂದ ಅವನಿಗೆ ಚಿರಂಜೀವಿತ್ವ ಪ್ರಾಪ್ತಿಯಾಯಿತು ಆದರೆ ವಿಷ್ಣು ಸಾನ್ನಿಧ್ಯಪರಿಪೂರ್ಣತೆಯನ್ನು ಹೊಂದಿದ್ದ, ಮೂರ್ತಿ ಹೋದ ಬಳಿಕ, ರಾವಣನಿಗೆ ಇಳಿಗಾಲ ಆರಂಭವಾಯಿತು ಸೀತಾಪಹಾರದ ನೆವ ಹಿಡಿದು, ಕಪಿಸೈನ್ಯದೊಂದಿಗೆ, ಲಂಕೆಗೆ ಬಂದ ಶ್ರೀರಾಮಚಂದ್ರನಿಂದ, ರಾವಣನ ಸರ್ವನಾಶವಾಗುವುದು ವಿಭೀಷಣನಿಗೆ ಲಂಕಾಧಿಪತ್ಯ ದೊರಕುತ್ತದೆ ಶ್ರೀರಾಮಚಂದ್ರನು ಹೊರಟುನಿಂತಾಗ, ವಿಭೀಷಣನು ತನ್ನಲ್ಲಿದ್ದ ವಾಸುದೇವಮೂರ್ತಿ ಯನ್ನು, ಕಾಣಿಕೆಯಾಗಿ ಶ್ರೀರಾಮನಿಗೊಪ್ಪಿಸಿದನು ಅವನು ಅದನ್ನು ಪುಷ್ಪಕ ವಿಮಾನದಲ್ಲಿರಿಸಿಕೊಂಡು ಸಾಕೇತನಗರಕ್ಕೆ ಕೊಂಡು ಹೋದನು ಅಲ್ಲಿ ಹನ್ನೊಂದು ಸಾವಿರ ವರ್ಷ ರಾಜ್ಯಭಾರ ಮಾಡುತ್ತಾ, ಈ ವಾಸುದೇವ ಮೂರ್ತಿಯನ್ನು ವಿಧವಿಧ ಭಕ್ತಿಯಿಂದ ಆರಾಧಿಸುವನು ಮುಂದೆ ತಾನು ಪರಂಧಾಮಕ್ಕೆ ಹೊರಟಾಗ, ಆ ಮಂಗಳ ಮೂರ್ತಿಯನ್ನು, ಸಮುದ್ರರಾಜನಿಗೊಪ್ಪಿಸಿದನು ವರುಣದೇವನು ಸಂತೋಷದಿಂದ ಸ್ವೀಕರಿಸಿ, ತನ್ನ ವಶದಲ್ಲಿರಿಸಿಕೊಳ್ಳುವನು

ಯುಗಯುಗಗಳು ಕಳೆದು ಮುಂದೆ ಭಗವಂತನು ಶ್ರೀಕೃಷ್ಣ ನಾಮಾಂಕಿತನಾಗಿ, ವಸುದೇವ - ದೇವಕಿಯರಿಗೆ ಸುಕುಮಾರನಾಗಿ ಜನಿಸುವನು ಅನೇಕಾನೇಕ ದುಷ್ಟದಾನವರ ಎದೆಮೆಟ್ಟಿ ದ್ವಾರಕೆಯಲ್ಲಿ ಮೆರೆಯುತ್ತಿದ್ದನು ಈ ಅವಧಿಯಲ್ಲಿ ವರುಣದೇವನು, ತನ್ನ ಬಳಿಯಿದ್ದ ವಾಸುದೇವ ಮೂರ್ತಿಯನ್ನು ಶ್ರೀಕೃಷ್ಣನಿಗೊಪ್ಪಿಸುವನು ತನ್ನ ಅವತಾರದ ಉದ್ದೇಶವಾದ ಭೂಭಾರ ಹರಣದ ಕಾರ್ಯವನ್ನು ನೆರವೇರಿಸಿದ ಬಳಿಕ, ವೈಕುಂಠಕ್ಕೆ ಮರಳುವ ಮುನ್ನ, ಶ್ರೀವರನು ವಾಸುದೇವ ಮೂರ್ತಿಯನ್ನು, ಶಾಶ್ವತವಾಗಿ ದ್ವಾರಕೆಯಲ್ಲಿ ಪ್ರತಿಷ್ಠೆಮಾಡುವನು ಪರಮ ಪುರುಷೋತ್ತಮನಾದ ಅನಂತ ವಾಸುದೇವನ ಮೂರ್ತಿ ನೆಲೆಯಾದುದರಿಂದ ದ್ವಾರಕೆಗೆ ಪುರುಷೋತ್ತಮ ಕ್ಷೇತ್ರವೆಂಬ ಹೆಸರು ಬಂತು ಆ ಮೂರ್ತಿ ಸ್ವಯಂ ಶ್ರೀಕೃಷ್ಣನೇ ಸನ್ನಿಹಿತನಾಗಿದ್ದಾನೆಂಬ ವಿಶ್ವಾಸ ಜನರಲ್ಲಿದೆ ಮುಂದೆ ಇದರ ಅಕ್ಕಪಕ್ಕಗಳಲ್ಲಿ ಸುಭದ್ರ ಮತ್ತು ಬಲರಾಮರ ವಿಗ್ರಹಗಳು ಋಷಿಗಳಿಂದ ಪ್ರತಿಷ್ಠೆಗೊಂಡವು. ಇಲ್ಲಿಯ ವಟವೃಕ್ಷ ಹಾಗೂ ಸಮುದ್ರದ ಮಧ್ಯಪ್ರದೇಶದಲ್ಲಿ, ದೇಹ ಬಿಟ್ಟವರಿಗೆ ಸಾಯುಜ್ಯಪದವಿ ಸಿಗುವುದೆಂದು ನಂಬಿಕೆಯಿದೆ ಭಾರತ ದೇಶದಲ್ಲಿ ಮೂರ್ತಿ ಪೂಜೆಗೆ, ಪುರಾಣೋಕ್ತವಾದ ಪರಂಪರೆಯಿದೆಯೆಂದು ತಿಳಿದುಬರುತ್ತದೆ

* * *




## ತಿರುಮಲೆ - ತಿರುಪತಿ ದೇವಸ್ಥಾನಗಳು, ತಿರುಪತಿ.

# ಬರ್ಡ್

### ಸಾರ್ಥಕ ಸೇವೆಯ ಆದರ್ಶ :

ಅಂಗವಿಕಲರ ಪುನರಾವಾಸ, ಪರಿಶೋಧನೆ, ಶಸ್ತ್ರಚಿಕಿತ್ಸೆಗಳ ಬಾಲಾಜಿ ಆಸ್ಪತ್ರೆಯು (ಬಾಲಾಜಿ ಇನ್ಸ್‌ಟಿಟ್ಯೂಟ್ ಆಫ್ ಸರ್ಜರಿ ರಿಸರ್ಚ್ ಅಂಡ್ ರಿಹ್ಯಾಬಿಲಿಟೇಷನ್ ಫಾರ್ ದಿ ಡಿಸೇಬಲ್ಡ್) ಮಾನವ ಸೇವೆಯ ಮೂಲಕ ಮಾಧವ ಸೇವೆಯನ್ನು ನಡೆಸುವ ತಿ ತಿ ದೇವಸ್ಥಾನಗಳ ಆದರ್ಶ ಪಂತಿಕೆಗೆ ಸಾಕ್ಷಿಯಾಗಿ ಅಂಗವಿಕಲರ ಸೇವೆಯಲ್ಲಿ ನಿರತವಾಗಿದೆ

1985 ರಲ್ಲಿ ಸ್ಥಾಪನೆಯಾದ ಬರ್ಡ್ ಸಂಸ್ಥೆ ಅಂಗ ರಚನಾ ಶಾಸ್ತ್ರ ಕ್ಷೇತ್ರದಲ್ಲಿ ಹಲವು ರೀತಿಯ ಹೊಸ ಹಾದಿಗಳನ್ನುಂಟುಮಾಡಿದೆ ಪೋಲಿಯೊ ಪೀಡಿತರು, ಜನ್ಮಾರಭ್ಯ ನ್ಯೂನತೆಗಳು, ಮಿದುಳ ಪಕ್ಷವಾತಗಳ ಮೂಲಕ ವಿಕಲಾಂಗರಾದ ರೋಗಿಗಳಿಗೆ ಉತ್ತಮವಾದ ಚಿಕಿತ್ಸೆಯನ್ನು ನೀಡುವ ಈ ಆಸ್ಪತ್ರೆ ಬಡ ಜನತೆಯ, ಅಗತ್ಯವಿದ್ದವರ ಸೇವೆಯಲ್ಲಿ ಸಮರ್ಪಿತವಾಗಿದೆ

### ಬರ್ಡ್‌ನ ಕೆಲವು ಸಾಧನೆಗಳು, ಅಗತ್ಯಗಳು, ಅನುಕೂಲಗಳು.

* ಬೆನ್ನು ಹುರಿಯ ಘಾಯದ ಚಿಕಿತ್ಸೆಯಲ್ಲಿ ಸದಾಸಿದ್ಧ ಯಂತ್ರೋಪಕರಣಗಳ ಬಳಕೆ
* ಎರಡು ಲಕ್ಷಕ್ಕೂ ಹೆಚ್ಚು ಮಂದಿಯ ಸಫಲ ಚಿಕಿತ್ಸೆಯಾಗಿದೆ.
* 300 ಒಳರೋಗಿಗಳ ಹಾಸಿಗೆಗಳ ಚಿಕಿತ್ಸೆಗೆ ಅವಕಾಶವಿರುವ ಕೇಂದ್ರೀಕೃತ ಹವಾನಿಯಂತ್ರಿತ ಆಸ್ಪತ್ರೆ, ನಾಲ್ಕು ಶಸ್ತ್ರ ಚಿಕಿತ್ಸಾ ಕೋಣೆಗಳು.
* ಕೃತಕ ಅಂಗಾಂಗಳ, ಆಧಾರಗಳ, ಆಲಂಬನಗಳ ಉಚಿತ ವಿತರಣೆ
* ಬರ್ಡ್‌ಗಾಗಿ ನೀಡುವ ಎಲ್ಲ ದಾನಗಳೂ ಆದಾಯಕರ ನಿಯಮದ 80 (ಜಿ) ಕಲವಿನ ಪ್ರಕಾರ ಆದಾಯ ಕರಮುಕ್ತವಾಗಿರುವುವು.
* ಐದು ಲಕ್ಷ ರೂಪಾಯಿ ಹಾಗೂ ಹೆಚ್ಚಿಗೆ ದಾನ ನೀಡಿದವರ ಹೆಸರಿನೊಡನೆ ಇರುವ ಭಾವಚಿತ್ರವನ್ನು ಬರ್ಡ್ ಆಸ್ಪತ್ರೆಯಲ್ಲಿ ಪ್ರದರ್ಶಿಸಲಾಗುವುದು
* ವರ್ಷಕ್ಕೆ ಒಮ್ಮೆ ಮೂರುದಿನ ದಾನಿಗಳ ಐದುಮಂದಿಗೆ ತಿರುಮಲೆಯಲ್ಲಿ ಉಚಿತದರ್ಶನ, ಸ್ವಾಮಿಯ ಆರತಿ ನೀಡಲಾಗುವುದು
* ಹತ್ತು ಲಕ್ಷ ರೂಗಳು ಹಾಗೂ ಹೆಚ್ಚಿನ ದಾನ ನೀಡುವವರ ಹೆಸರನ್ನು ಒಂದು ಕೋಣೆಗೆ ಇಡಲಾಗುವುದು.
* ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀ ಅಮ್ಮನವರ ಬೆಳ್ಳಿಯ ಚಿತ್ರದ ಜ್ಞಾಪಿಕೆಯನ್ನು ಐದು ಲಕ್ಷ, ಹತ್ತು ಲಕ್ಷ ರೂಪಾಯಿಗಳ ದಾನಿಗಳಿಗೆ ನೀಡಲಾಗುವುದು

ದಾನಿಗಳು ಉದಾರವಾಗಿ ನೀಡುವ ದಾನಗಳನ್ನು ಬರ್ಡ್‌ನ ವಿವಿಧ ಯೋಜನೆಗಳಲ್ಲಿ ತೊಡಗಿಸಲಾಗುವುದು ಕೃತಕ ಅಂಗಾಂಗಗಳ ಉತ್ಪಾದನೆ ವಿತರಣೆಗೆ, ರೋಗಿಗಳ ಉಚಿತ ಭೋಜನ ರಿಯಾಯಿತಿ ದರಗಳ ಪ್ರಯಾಣ ವೆಚ್ಚಗಳಿಗೆ ಬಳಸಲಾಗುವುದು ದಾನಗಳನ್ನು ಕಾರ್ಯನಿರ್ವಹಣಾಧಿಕಾರಿ, ಬರ್ಡ್ ಟ್ರಸ್ಟ್, ತಿ ತಿ ದೇವಸ್ಥಾನಗಳು, ತಿರುಪತಿ - ಇವರ ಹೆಸರಿಗೆ ಕಳುಹಿಸಬಹುದು



ಕಾರ್ಯನಿರ್ವಹಣಾಧಿಕಾರಿ,

ತಿ ತಿ ದೇವಸ್ಥಾನಗಳು, ತಿರುಪತಿ - 517 501

# ಯಜ್ಞ, ದಾನ, ತಪಸ್ಸು

ಪ್ರೊ|| ವಿ. ಎನ್. ಭಟ್ಟ

ವೇದಾಃ ಪ್ರಮಾಣಂ ಸ್ಮೃತಯಃ ಪ್ರಮಾಣಂ
ಧರ್ಮಾರ್ಥ ಯುಕ್ತಂ ವಚನಂ ಪ್ರಮಾಣಂ
ಯಸ್ಯ ಪ್ರಮಾಣಂ ನ ಭವೇತ್ ಪ್ರಮಾಣಂ
ಕಸ್ತಸ್ಯ ಕುರ್ಯಾದ್ವಚನಂ ಪ್ರಮಾಣಂ
- ಸುಭಾಷಿತ ರತ್ನ ಭಾಂಡಾಗಾರಂ

ಶ್ರುತಿ - ಸ್ಮೃತಿಗಳು ವಿಶ್ವಸನೀಯ ಪ್ರಮಾಣಗಳು, ಅದರಂತೆ ಧರ್ಮ - ಅರ್ಥ ಮೊದಲಾದ ನಾಲ್ಕು ವಿಧ ಪುರುಷಾರ್ಥಗಳನ್ನು ತಿಳಿಸುವ ಮಹಾತ್ಮರ ವಾಣಿ ಕೂಡ ಅಷ್ಟೇ ಪ್ರಮಾಣ 'ಇವುಗಳೆಲ್ಲಾ ಪ್ರಮಾಣವಲ್ಲ' ಎಂದು ಯಾರಾದರೂ ಹೇಳಿದರೆ ಅಂತವರ ಮಾತು ಪ್ರಮಾಣವಲ್ಲ (ಅಂದರೆ ನಂಬ ಲರ್ಹವಾದುದಲ್ಲ)

'ವೇದೋಖಿಲೋ ಧರ್ಮ ಮೂಲಂ' ಎಂಬಂತೆ ವೇದಗಳು ದರ್ಮದ ಬುನಾದಿ, ಅವು ಅಪೌರು ಷೇಯ, ವೇದ ಮಂತ್ರಗಳು ಋಷಿ-ಮುನಿಗಳು ದಿವ್ಯ ದೃಷ್ಟಿಯಿಂದ ಕಂಡುಕೊಂಡವುಗಳು ಈ ಮಂತ್ರಗಳಲ್ಲಿ ಹೆಚ್ಚಿನವುಗಳು ನಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಬಹುದಾದ, ನಮ್ಮ ಬಾಳಿಗೆ ಶಾಂತಿ ನೆಮ್ಮದಿ - ತೃಪ್ತಿ ಉಂಟುಮಾಡುವ, ನಮ್ಮ ನಡ ತೆಯನ್ನು ಉತ್ತಮಗೊಳಿಸುವ, ಧರ್ಮಾಧರ್ಮಗ ಳನ್ನು ತಿಳಿಸುವ ಉದಾತ್ತ ವಿಷಯಗಳನ್ನು ಒಳ ಗೊಂಡಿರುವುದು ಗಮನಾರ್ಹ ಅವು ಮಾನವ ಜೀವನದಲ್ಲಿ ಬರುವ ಅನೇಕ ವಿಷಯಗಳ ಬಗ್ಗೆ ಹೊಸ ಹೊಸ ಬೆಳಕನ್ನು ನೀಡುವ ಮಾರ್ಗದರ್ಶಿಗ ಳಾಗಿವೆ 'ಆನೋ ಭದ್ರಾಃ ಕ್ರತವೊ ಯಂತು ವಿಶ್ವತಃ' ಅಂದರೆ 'ವಿಶ್ವದ ಎಲ್ಲೆಡೆಯಿಂದ ಒಳ್ಳೆಯ ವಿಚಾರ ಗಳು ನಮ್ಮತ್ತ ಹರಿದುಬರಲಿ' ಎಂದು ವೇದಗಳು ಕರ ನೀಡಿವ

ಇಂದು ನಾವು ಜ್ಞಾನಾರ್ಜನೆಗೆ ಹೆಚ್ಚಿನ ಒತ್ತು ನೀಡುತ್ತಿದ್ದೇವೆ ಪ್ರತಿಯೊಬ್ಬರಿಗೂ ಅಕ್ಷರಾಭ್ಯಾಸ ಹಾಗೂ ಪ್ರಾಥಮಿಕ ವಿದ್ಯೆ ನೀಡಿ ಸಾಕ್ಷರರನ್ನಾಗಿ ಮಾಡುವ ಯೋಜನೆ ಹಾಕಿಕೊಳ್ಳುತ್ತಿದ್ದೇವೆ ವೇದ ದಲ್ಲಿ ಬರುವ "ಅಸತೋಮಾ ಸದ್ಗಮಯ, ತಮ ಸೋಮಾ ಜ್ಯೋತಿರ್ಗಮಯ, ಮೃತ್ಯೋರ್ಮಾ ಅಮೃತಂಗಮಯ" ಎಂಬ ಮಂತ್ರ "ನಾವು ಅಸ ತ್ತಿನಿಂದ ಸತ್ತಿನೆಡೆಗೆ, ಕತ್ತಲೆಯಿಂದ ಬೆಳಕಿನೆ ಡೆಗೆ, ಮೃತ್ಯುವಿನಿಂದ ಅಮೃತದೆಡೆಗೆ ಸಾಗಬೇಕು" ಎಂದು ಸಾರುತ್ತದೆ. ಈ ಮಂತ್ರ ವೇದಕಾಲದ ಲ್ಲಿಯೇ ನಮ್ಮವರು ಶಿಕ್ಷಣಕ್ಕೆ ನೀಡಿದ ಪ್ರಾಧಾನ್ಯ ಎಲ್ಲರೂ ವಿದ್ಯಾವಂತರಾಗಬೇಕೆಂಬ ಸದಾಶಯ ವನ್ನು ತಿಳಿಸುತ್ತದೆ

ಅಯಂ ನಿಜಃಪರೋವೇತಿ
ಗಣನಾಲಘುಚೇತಸಾಮ್
ಉದಾರಚರಿತಾನಾಂತು
ವಸುಧೈವ ಕುಟುಂಬಕಮ್

ನಾವೆಲ್ಲರೂ ಜ್ಞಾನಿಗಳಾಗಬೇಕು, ವಿವೇಕಿಗ ಳಾಗಬೇಕು, ಪ್ರಜ್ಞಾವಂತರಾಗಬೇಕು, ಕ್ಷುಲ್ಲಕ ದೃಷ್ಟಿಬಿಟ್ಟು ಉದಾರಚಾರಿತ್ರ್ಯರೂಢಿಸಿಕೊಳ್ಳಬೇಕು, ಎಲ್ಲರೂ ನಮ್ಮವರು ಎಂಬ ವಿಶ್ವಕುಟುಂಬ ಭಾವನೆ ಬೆಳೆಸಿಕೊಳ್ಳಬೇಕು, ಎನ್ನುವುದು ಅಂದಿನ ಬಯಕೆ ಯಾಗಿತ್ತು ಆದ್ದರಿಂದಲೇ 'ಅಸತೋಮಾ' ಎಂಬ ಮಂತ್ರವನ್ನುಸಾಮೂಹಿಕವಾಗಿ ಉಚ್ಚರಿಸುತ್ತಿದ್ದರು

ವೈದಿಕ ಸಂಸ್ಕೃತಿಯಲ್ಲಿ ಯಜ್ಞಗಳ ವಿಶಾಲ ಕಲ್ಪ ನೆಯಿದೆ ವೇದಗಳಲ್ಲಿ ಬರುವ ಎರಡು ಬಗೆಯ ಯಜ್ಞದ ಪ್ರಸ್ತಾವ ಬಹುಮುಖ್ಯವಾಗಿದೆ ಒಂದು ಧಾರ್ಮಿಕ ಯಜ್ಞ, ಅದು ಜ್ಯೋತಿಷ್ಟೋಮ ಅಪ್ತೋ ರ್ಯಾಮ, ಸರ್ವತೋಮುಖ, ಅತಿರತ್ರಾದಿಗಳು ಧಾರ್ಮಿಕ ಯಜ್ಞವನ್ನು ವೇದಕಾಲದಲ್ಲಿ ಎಲ್ಲರೂ ಮಾಡುವಂತಿರಲಿಲ್ಲ ಆದರೆ ಯಜ್ಞದಿಂದ ಬರುವ ಫಲ ಸ್ವೀಕರಿಸುವಲ್ಲಿ ಎಲ್ಲರಿಗೂ ಸಮಾನ ಅರ್ಹತೆ ಯಿತ್ತು ಈ ಯಜ್ಞಗಳನ್ನು 'ಇಷ್ಟ' ಎಂದು ಕರೆಯ ಲಾಗುತ್ತಿತ್ತು

ಸಾಮಾಜಿಕ ಯಜ್ಞವೆಂದರೆ ಸಮಾಜಕ್ಕಾಗಿ ಮಾಡುವ ಕೆಲಸಗಳು ಈ ಸಾಮಾಜಿಕ ಯಜ್ಞ ದಲ್ಲಿ ಎಲ್ಲರೂ ಭಾಗವಹಿಸಬಹುದು ಸಾರ್ವ ಜನಿಕ ಉದ್ದೇಶಕ್ಕಾಗಿ ಕೆರೆಗಳನ್ನು ಕಟ್ಟಿಸುವುದು, ಬಾವಿಯನ್ನು ತೋಡಿಸುವುದು, ದೇವಸ್ಥಾನಗಳ ನಿರ್ಮಾಣ, ಸಾಲು ಮರಗಳನ್ನು ನೆಡುವುದು, ಬನ್ನಿ ಅಶ್ವತ್ಥ, ಬಿಲ್ವ, ಬೇವು, ಅತ್ತಿ, ಆಲ - ಮುಂತಾದ ಪುಣ್ಯವೃಕ್ಷಗಳನ್ನು ನೆಟ್ಟು ತೋಪುಗಳನ್ನು ನಿರ್ಮಿಸು ವುದು, ಉದ್ಯಾನವನಗಳನ್ನು ನಿರ್ಮಿಸುವುದು ಕೆರೆ ಗಳನ್ನು ಶುದ್ಧೀಕರಿಸುವುದು ಈ ಎಲ್ಲ ಸಾಮಾ ಜಿಕ ಯಜ್ಞಗಳನ್ನು 'ಪೂರ್ತ' ಎಂದು ಕರೆಯಲಾ ಗುತ್ತಿತ್ತು 'ಇಷ್ಟಾಪೂರ್ತೇಸಂಸೃಜೇಥಾಮಯಂಚ' ಎಂಬ ವೇದೋಕ್ತಿಯಲ್ಲಿ ಈ ಹೂರಣ ಅಡಗಿದೆ ಹಾಗೇ ರೋಗಿಗಳ ಶುಶ್ರೂಷೆ, ಮಿತ್ರರಿಗೆ ಸಹಾಯ, ಗುರು-ಹಿರಿಯರನ್ನು ಗೌರವದಿಂದ ಕಾಣುವುದು, ವೃದ್ಧರ ಬಗ್ಗೆ ಪ್ರೀತಿ ಕಾಳಜಿ ವಹಿಸುವುದು, ಅತಿಥಿ ಸತ್ಕಾರ, ಸ್ತ್ರೀಯರ ಹಾಗೂ ಮಕ್ಕಳ ರಕ್ಷಣೆ ಇವೆ ಲ್ಲವೂ 'ಪೂರ್ತ' ಕರ್ಮದ ಪರಿಧಿಯಲ್ಲಿ ಬರುತ್ತಿದ್ದು, ಆನಂದ ಸಂತೋಷ ನೆಮ್ಮದಿ ಲೋಕ ಕಲ್ಯಾಣವೇ – ಇವುಗಳ ಮೂಲ ಉದ್ದೇಶವೆಂಬುದನ್ನು ಕಾಣಬಹುದು

ಇದನ್ನೇ ಕನ್ನಡದ ಶಿಲಾಶಾಸನವೊಂದು ಸುಂದ ರವಾಗಿ ಚಿತ್ರಿಸಿದೆ "ಕೆರೆಯಂ ಕಟ್ಟಿಸು, ಬಾವಿಯಂ ಸವೆಸು, ದೇವಾಗಾರಮಂ ಮಾಡಿಸು, ಸೆರೆಯೊಳ್ ಸಿಕ್ಕಿದನಾಥರಂ ಬಿಡಿಸು, ಮಿತ್ರರ್ಗಿಂಬುಗೆಯ್ ನಂಬಿದರ್ಗೆರವಟ್ಟಾಗಿರು ಶಿಷ್ಟರಂ ಪೊರೆ ಎನ್ನುತ್ತಿಂ ತೆಲ್ಲವಂ, ಪಿಂತೆ ತಾನ್, ಒರೆದಳ್ ಪಾಲೆರೆವಂದು ತೊಟ್ಟು ಕಿವಿಯೊಳ್ ಲಕ್ಷ್ಮೀಧರಾಮಾತ್ಯನಾ" ವಿಜ ಯನಗರದ ಮಂತ್ರಿಯಾಗಿದ್ದ ಲಕ್ಷ್ಮೀಧರನ ತಾಯಿ ಬಾಲ್ಯದಲ್ಲಿ ಒಂದೊಂದು ತೊಟ್ಟು ಹಾಲು ಕುಡಿ ಸುವಾಗಲೂ ಕಿವಿಯಲ್ಲಿ ನೀನು ಮುಂದೆ ಹೀಗಾಗ ಬೇಕು ಎಂದು ಪೂರ್ತ ಕರ್ಮಗಳ ಪಟ್ಟಿಯನ್ನೇ ನೀಡಿ ದ್ದನ್ನು ಈ ಪದ್ಯದಲ್ಲಿ ಕಾಣಬಹುದು

ಇನ್ನು ಶ್ರುತಿ ಸ್ಮೃತಿಗಳಲ್ಲಿ ನಿರೂಪಿತವಾದ ಆಹಾ ರಪದಾರ್ಥಗಳನ್ನು ಕೂಲಂಕಶವಾಗಿ ಗಮನಿಸಿದರೆ, ಅದು ಇಂದೂ ನಮ್ಮ ಜೀವನಕ್ಕೆ ಅತ್ಯಂತ ಆವಶ್ಯ ಕವಾಗಿದೆ ಎಂದರೆ ತಪ್ಪಾಗದು ಮದ್ಯ, ಮಾಂಸ, ಕೊಬ್ಬು ಅಲ್ಲಿ ವರ್ಜ್ಯ ಹಾಲು-ಮಜ್ಜಿಗೆ-ಹಣ್ಣು-ತರ ಕಾರಿ ಮುಂತಾದ ಶುದ್ಧ ಪೌಷ್ಟಿಕ ಸಾತ್ವಿಕ ಆಹಾರ ಮಾತ್ರ ಸೇವ್ಯ ತಾಮಸ ಆಹಾರ ಸೇವನೆ ದೈಹಿಕ ಮಾನಸಿಕ ಅನಾರೋಗ್ಯಕ್ಕೆ ಮೂಲ 'ಜೈಸಾ ಖಾವೇ ಅನ್ನ್, ವೈಸಾ ಆವೇ ಮನ್' ಎಂಬ ಹಿಂದಿ ಗಾದೆಯಂತೆ ಆಹಾರ ಹೇಗೋ ಮನಸ್ಸೂ ಹಾಗೆ ಪರಿವರ್ತಿತವಾಗುತ್ತದೆ ಆಹಾರ ಮತ್ತು ಮಾತು ಮಿತವಾಗಿದ್ದಷ್ಟೂ ಲೇಸೆಂಬುದು ವೇದೋಪದೇಶ 'ಸತ್ಯಾಯ ಮಿತಭಾಷಿಣಾಂ' ಎಂಬಂತೆ ಹೆಚ್ಚು ಹೆಚ್ಚು ಮಾತಾಡಿದಷ್ಟೂ ಕೆಲವೊಮ್ಮೆ ಸುಳ್ಳು ನುಸುಳುವು ದರಿಂದ ಹಿಂದಿನ ಋಷಿ - ಮುನಿಗಳು ಎಷ್ಟು ಬೇಕೋ ಅಷ್ಟೇ ಮಾತಾಡುತ್ತಿದ್ದರಂತೆ 'ಮಾತು

ಬೆಳ್ಳಿ, ಮೌನ ಬಂಗಾರ' ಎಂಬುದು ಅವರ ಅಭಿಪ್ರಾಯವಾಗಿತ್ತು ವೇದ ಕಾಲೀನ ಋಷಿಮುನಿಗಳು ಹಿತಭೋಜಿ - ಮಿತಭೋಜಿಗಳಾಗಿದ್ದರಲ್ಲದೆ, ಹಿತ ಭಾಷಿ ಮಿತಭಾಷಿ, ಸ್ಮಿತಭಾಷಿಗಳಾಗಿದ್ದರು ಎನ್ನುವುದು ಶ್ರುತಿ ಸ್ಮೃತಿಗಳಿಂದ ತಿಳಿದುಬರುತ್ತದೆ

ನಿತ್ಯನೀತಿ ವೇದಗಳಲ್ಲಿ ಬರುವ ನೀತಿ ಸಂದೇಶವಂತೂ ಹೆಜ್ಜೆ - ಹೆಜ್ಜೆಗೂ ನಮಗೆ ದಾರಿ ದೀಪವಾಗಿದೆ ಉದಾ - "ಸತ್ಯಂ ವದ", "ಧರ್ಮಂಚರ", "ಮಾತೃದೇವೋಭವ", "ಪಿತೃದೇವೋಭವ", "ಆಚಾರ್ಯದೇವೋ ಭವ", "ಅತಿಥಿ ದೇವೋ ಭವ" ಮುಂತಾದ ನಿತ್ಯ ನೀತಿ ಬೋಧಕ ವಾಕ್ಯಗಳು ಅವಿಸ್ಮರಣೀಯವಷ್ಟೇ ಅಲ್ಲ; ಚಿರಸ್ಮರಣೀಯವೂ ಹೌದು

ನಾವು ಒಳ್ಳೆ ಪ್ರಜೆಗಳಾಗಿ ಗೌರವಯುತವಾಗಿ ಸಮಾಜದಲ್ಲಿ ಬಾಳಬೇಕು ನಮ್ಮಿಂದ ಇತರರಿಗೆ ನೋವಾಗದಂತೆ ಎಚ್ಚರ ವಹಿಸಬೇಕು 'ಸಜಾತೋ ಯೇನ ಜಾತೇನ ವಯೋಯಾತಿ ಸಮುನ್ನತಿಂ' ಎಂಬಂತೆ ಯಾರ ಹುಟ್ಟಿನಿಂದ ವಂಶ, ಗ್ರಾಮ, ದೇಶ ಸಮುನ್ನತಿ ಹೊಂದುತ್ತದೋ ಅವನ ಹುಟ್ಟೇ ಹುಟ್ಟು, ನಮ್ಮ ನಡತೆ ಎಲ್ಲರಿಗೂ ಮಾರ್ಗದರ್ಶಕವಾಗಿರಬೇಕು, ನಮ್ಮ ಪರಿಸರದಲ್ಲಿರುವ, ಗಿಡ ಮರ, ನದಿ ತೊರೆ, ಪಶು ಪಕ್ಷಿಗಳನ್ನು ನಾವು ಚೆನ್ನಾಗಿ ರಕ್ಷಿಸಬೇಕು ಈ ರೀತಿಯ ನಡುವಳಿಕೆಯೇ ತಪಸ್ಸು, ಅದನ್ನೇ ವೇದಗಳು ತದ್ಧಿ ತಪಃ ತದ್ಧಿ ತಪಃ ಅದೇ ತಪಸ್ಸು ಎನ್ನುತ್ತವೆ ತಪಸ್ಸೆಂದರೆ ಕೇವಲ ಗಡ್ಡಬಿಟ್ಟು ಗುಡ್ಡ ಸೇರಿ ಕುಳಿತುಕೊಳ್ಳುವುದಿಲ್ಲ ಸ್ವತಃ ಒಳ್ಳೆಯವರಾಗಿದ್ದು ಒಳ್ಳೆಯ ಚಿಂತನ - ಮಂಥನ ಸದ್ವಚನ-ಸದಾಚರಣ, ಸಾಧುಜೀವನ ಆತ್ಮಸಂಯಮ ಮಾಡುವುದೇ ತಪಸ್ಸು ಎಂದು ಶ್ರುತಿ - ಸ್ಮೃತಿಗಳು ಸಾರುತ್ತವೆ

ಇಂಥ ತಪಸ್ಸು ದೈಹಿಕ, ಮಾನಸಿಕ, ವಾಚಿಕ ಎಂದು ಮೂರು ವಿಧ ಬ್ರಹ್ಮಚರ್ಯ ಅಹಿಂಸ, ಸೇವೆ ಮುಂತಾದವು ದೈಹಿಕ ತಪಸ್ಸುಗಳಾದರೆ, ಉತ್ತಮವಾದ ಆಲೋಚನೆ, ಮಾನಸಿಕ ಸಮತೋಲನವನ್ನು ಕಾಪಾಡಿಕೊಳ್ಳುವುದು, ಮಾನ-ಅಪಮಾನಗಳನ್ನು ಸಮಾನ ಚಿತ್ತದಿಂದ ಎದುರಿಸುವುದು ಯಾವಾಗಲೂ ಸಂತೋಷಚಿತ್ತರಾಗಿರುವುದು, ದಯೆ ಹಾಗೂ ತ್ಯಾಗ ಬುದ್ಧಿಗಳನ್ನು ಅಭಿವೃದ್ಧಿಪಡಿಸಿಕೊಂಡು, ಕಾಮ - ಕ್ರೋಧ - ಲೋಭ - ಮೋಹ - ಮದ - ಮಾತ್ಸರ್ಯ ಭಾವಗಳಿಂದ ದೂರವಿರುವುದು, ಇವೆಲ್ಲ ಮಾನಸಿಕ ತಪಸ್ಸು, ಸತ್ಯವನ್ನು ನುಡಿಯುವುದು, ಇತರರನ್ನು ನಿಂದಿಸದೇ ಇರುವುದು, ಯಾವಾಗಲೂ 'ಸತ್ಯಂ ಬ್ರೂಯಾತ್ ಪ್ರಿಯಂ ಬ್ರೂಯಾತ್' ಎಂಬಂತೆ ಸತ್ಯವಾದ ಮಧುರವಾದ ಹಾಗೂ ಪ್ರಯೋಜನಕಾರಿಯಾದ ಮಾತನ್ನಾಡುವುದು, ಮುಂತಾದವು ವಾಙ್ಮಯ ತಪಸ್ಸಿನಲ್ಲಿ ಬರುತ್ತದೆ ಮನುಷ್ಯ ಸುಖ ಶಾಂತಿಯಿಂದ ಬದುಕಲು ಇವು ಸಹಾಯಕಾರಿ ಜೀವನದಲ್ಲಿ ಆದಷ್ಟೂ ಕೀಳರಿಮೆಯನ್ನು ಬಿಟ್ಟು ಉದಾತ್ತಭಾವನೆಗಳನ್ನು ಬೆಳೆಸಿಕೊಳ್ಳಬೇಕು ಸತ್ಯ - ಧರ್ಮ - ಶಾಂತಿ - ಪ್ರೇಮ - ಅಹಿಂಸೆಯೆಂಬ ಮಾನವೀಯ ಗುಣಗಳನ್ನು ದೈನಂದಿನ ಜೀವನದಲ್ಲಿ ಬೆಳಗಿನಿಂದ ರಾತ್ರಿಯವರೆಗಿನ ನಮ್ಮ ಎಲ್ಲ ವ್ಯವಹಾರಗಳಲ್ಲಿ ಅಳವಡಿಸಿಕೊಳ್ಳಬೇಕು

ವೈದಿಕ ಸಂಸ್ಕೃತಿಯಲ್ಲಿ ಬರುವ ಈ ಮೂರು ವಿಧವಾದ ತಪಸ್ಸನ್ನು ನಾವು ಅಳವಡಿಸಿಕೊಳ್ಳುವುದರಲ್ಲಿ ಯಾವುದೇ ನೇಮ ನಿಷ್ಠೆಗಳಾಗಲೀ, ಕಟ್ಟುಪಾಡಾಗಲೀ ಇಲ್ಲ ಇದನ್ನು ಮೈಗೂಡಿಸಿಕೊಂಡರೆ ಜೀವನದಲ್ಲಿ ಸುಖ - ಶಾಂತಿ - ನೆಮ್ಮದಿ ದೊರೆಯುತ್ತದೆ

ವೈದಿಕ ಸಂಸ್ಕೃತಿಯಲ್ಲಿ ಬರುವ ದಾನ ಮತ್ತು ತ್ಯಾಗ ಕೂಡಾ ಇಂದು ನಮಗೆ ಅನುಕರಣೀಯ ಅನುಸರಣೀಯ ಎಂದರೆ ತಪ್ಪಾಗಲಾರದು

"ದಾತವ್ಯಮಿತಿ ಯದ್ದಾನಂ
ದೀಯತೇ ಅನುಪ ಕಾರಿಣೇ
ದೇಶ - ಕಾಲೇ - ಚ - ಪಾತ್ರೇ ಚ
ತದ್ದಾನಂ ಸಾತ್ವಿಕಂ ಸ್ಮೃತಮ್"

ಎಂಬ ಭಗವದ್ಗೀತೆಯ ಉಕ್ತಿಯಂತೆ ಯಾವುದೇ ಪ್ರತ್ಯುಪಕಾರ ಬಯಸದೆ ದೇಶಕಾಲ ಪಾತ್ರ ಇವುಗಳನ್ನೆಲ್ಲ ಯೋಚಿಸಿ, ಸಾತ್ವಿಕ ವ್ಯಕ್ತಿಗೆ ನೀಡಿದ ದಾನವೇ ನಿಜವಾದ ದಾನ "ಕೇವಲಾಘೋ ಭವತಿ ಕೇವಲಾದೀ" ಅಂದರೆ "ದಾನ ಮಾನ ಮಾಡದೇ ತಾನೊಬ್ಬನೇ ತಿಂದರೆ, ಅವನು ತಿನ್ನುವುದು ಅನ್ನವನ್ನಲ್ಲ, ಪಾಪವನ್ನು" ಎನ್ನುತ್ತದೆ ವೇದ 'ದಾನ' ಎಂದರೆ ನಮಗೆ ಬೇಡವಾದುದನ್ನು ನೀಡುವುದಲ್ಲ, ಕೊಡುವವರಿಗೂ ತೆಗೆದುಕೊಳ್ಳುವವರಿಗೂ ಪ್ರಯೋಜನವಾಗುವ, ಜೀವನಮಟ್ಟವನ್ನು ಉತ್ತಮಪಡಿಸುವ ವಸ್ತುಗಳನ್ನು ದಾನ ಮಾಡಬೇಕು ಸ್ವೀಕರಿಸುವವರಿಗೆ ತೆಗೆದುಕೊಳ್ಳುವ ದಾನದಿಂದ ಸಂತೋಷವಾಗಬೇಕೇ ಹೊರತು ನೋವಾಗಬಾರದು ಅನ್ನದಾನ ವಸ್ತ್ರದಾನ ಹಿರಣ್ಯದಾನ ಈ ಒಂದೊಂದೂ ಅತ್ಯಂತ ಸುಖಪ್ರದ

ಹೀಗೆ ವೈದಿಕ ಸಂಸ್ಕೃತಿಯಲ್ಲಿ ಯಜ್ಞ - ದಾನ - ತಪಸ್ಸುಗಳನ್ನು ಕುರಿತಂತೆ ಬರುವ ವಿಶಾಲ ಕಲ್ಪನೆ ಇಂದೂ ಪ್ರಸ್ತುತವಾಗಿದ್ದು ಅವು ಸಮಾಜದ ಒಳಿತಿಗೆ, ಸುಖ ಶಾಂತಿ ನೆಮ್ಮದಿಗೆ, ಸುಂದರ ಸಮಾಜ ನಿರ್ಮಾಣಕ್ಕೆ ಸಹಾಯಕವಾಗಿದೆ

#  ತಿ. ತಿ. ದೇವಸ್ಥಾನಗಳ ಪರಿಚಯ 

## ಶ್ರೀ ವೆಂಕಟೇಶ್ವರಸ್ವಾಮಿ ನೆಲೆಯಾದ ಶ್ರೀಕ್ಷೇತ್ರ ತಿರುಮಲೆ

ವೆಂಕಟಾದ್ರಿ ಸಮಂ ಸ್ಥಾನಂ
ಬ್ರಹ್ಮಾಂಡೇ ನಾಸ್ತಿ ಕಿಂಚನ
ವೆಂಕಟೇಶ ಸಮೋ ದೇವೋ
ನ ಭೂತೋ ನಭವಿಷ್ಯತಿ

ತಿರುಮಲೆಯ ಪರ್ವತಗಳಲ್ಲಿ ಸುಶೋಭಿತವಾಗಿರುವ ಶ್ರೀ ವೆಂಕಟೇಶ್ವರಸ್ವಾಮಿ ಆಲಯವು ಭಾರತದ ಪ್ರಪ್ರಾಚೀನ ಆಲಯವೆಂದು ಪ್ರಸಿದ್ಧವಾಗಿದೆ. ಕಲಿಯುಗದಲ್ಲಿ ವೆಂಕಟನಾಯಕನಾದ ಶ್ರೀ ವೆಂಕಟೇಶ್ವರಸ್ವಾಮಿಯನ್ನು ಅರ್ಚಿಸುವುದರಿಂದಲೇ ಮುಕ್ತಿಯನ್ನು ಪಡೆಯಬಹುದೆಂದು ಶಾಸ್ತ್ರಗಳು, ಪುರಾಣಗಳು, ಸ್ಥಳ ಮಾಹಾತ್ಮ್ಯಗಳು ಏಕ ಕಂಠದಿಂದ ಘೋಷಿಸುತ್ತಿವೆ

ವೆಂಕಟಾದ್ರಿಯು ಪಾವಿತ್ರ್ಯದಲ್ಲಿ ವಿಶಿಷ್ಟವಾದುದೆಂಬುದನ್ನು ಸ್ಪಷ್ಟ ಪಡಿಸಲು, ಸ್ವಾಮಿ ನೆಲೆಸಿರುವ ಪರ್ವತವನ್ನು ಪಾದಗಳಿಂದ ತಾಕಿ ಮೇಲೇರುವುದು ಪಾಪ ಕರ್ಮವೆಂದು ಭಾವಿಸಿ, ಮೊಣಕಾಲುಗಳನ್ನೂರಿ ಬೆಟ್ಟವನ್ನೇರಿದ ಶ್ರೀ ವೈಷ್ಣವ ಆಚಾರ್ಯರಾದ ಭಗವದ್ರಾಮಾನುಜರ ಉದಾಹರಣೆಯೊಂದೇ ಸಾಕು

### ಇತಿಹಾಸ

ಆಲಯದ ಪ್ರಾಚೀನತೆಯ ಬಗ್ಗೆ ಸಾಕಷ್ಟು ಶಾಸನಾಧಾರವಿದ್ದು, ಇದನ್ನು ತಿರುಮಲೆ ತಿರುಪತಿ ದೇವಸ್ಥಾನದವರು ಸಂಗ್ರಹಿಸಿ ಸಂಪಾದಿಸಿ ಪ್ರಕಟಿಸಿದ್ದಾರೆ. ಆಲಯವು ಅತಿಪ್ರಾಚೀನ ಕಾಲದಿಂದಲೂ ಇದೆಯೆಂಬುದಾಗಿಯೂ, ಋಗ್ವೇದದಲ್ಲಿಯೂ ಶ್ರೀ ವೆಂಕಟೇಶ್ವರಸ್ವಾಮಿಯ ಉಲ್ಲೇಖವಿದೆಯೆಂಬುದಾಗಿಯೂ ನಂಬಲಾಗಿದೆ

'ಶ್ರೀ ವೆಂಕಟಾಚಲ ಮಹಾತ್ಮ್ಯವು' ದ್ವಾದಶ ಮಹಾಪುರಾಣಗಳಲ್ಲಿ ಬರುವಂತಹ ಪುರಾಣಕಥೆಯನ್ನು ಒಳಗೊಂಡಿದೆ. ಪುರಾಣ ಕಥೆಯ ಪ್ರಕಾರ ಮಹಾಪ್ರಳಯದ ನಂತರ ಪರಮಪುರುಷನಾದ ಮಹಾವಿಷ್ಣುವು ಶ್ವೇತವರಾಹರೂಪದಲ್ಲಿ ಭೂಮಿಯನ್ನು ಧ್ವರಿಸಿ ಸೃಷ್ಟಿಯನ್ನು ಪುನಃ ನೆಲೆಗೊಳಿಸಿದ ನಂತರ, ಹಲಕಾಲ ಭೂಮಿಯಲ್ಲಿ ನಿಂತು ದುಷ್ಟ ಶಿಕ್ಷಣ ಶಿಷ್ಟ ರಕ್ಷಣ ಕಾರ್ಯದಲ್ಲಿ ತೊಡಗಲು ನಿರ್ಧರಿಸಿದ - ಹೀಗೆ ತಿರುಮಲೆಯ ಸ್ವಾಮಿಪುಷ್ಕರಿಣಿಯ ಉತ್ತರ ಭಾಗದಲ್ಲಿನ ವರಾಹತೀರ್ಥದ ದಡದಲ್ಲಿ ವರಾಹಾವತಾರದಲ್ಲಿ ಸ್ವಾಮಿ ನೆಲೆಸಿದ ಶ್ವೇತವರಾಹಸ್ವಾಮಿಯ ಈ ಅವತಾರ ಮೂರ್ತಿಯ ವಿಗ್ರಹವೇ ಸ್ವಾಮಿ ಪುಷ್ಕರಿಣಿಯ ದಡದಲ್ಲಿ ನೆಲೆಯಾಗಿದೆ. ಶ್ರೀ ವೆಂಕಟೇಶ್ವರ ಸ್ವಾಮಿ ಆಲಯಕ್ಕಿಂತ ಪ್ರಾಚೀನ ಆಲಯವೆಂದು ಈ ಆಲಯ ಪರಿಗಣಿತವಾಗಿದ್ದು ಅರ್ಚನೆ, ನಿವೇದನೆಗಳಲ್ಲಿ ಅಗ್ರಮಾನ್ಯತೆ ಪಡೆದಿದೆ

ವರಾಹ ಭವಿಷ್ಯೋತ್ತರ ಪುರಾಣಗಳಲ್ಲಿ ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ವೆಂಕಟಾಚಲ ಪರ್ವತಗಳ ಬಗ್ಗೆ ಮತ್ತೂ ಹಲವಾರು ಐತಿಹ್ಯಗಳುಂಟು

ವೆಂಕಟಾಚಲದ ಯಾತ್ರೆಯಿಂದಾಗುವ ಬಹು ಸೌಖ್ಯ ಸಂಪದಗಳನ್ನು ಪುರಾಣಗಳು ವರ್ಣಿಸಿದ್ದು, ಶ್ರೀ ವೆಂಕಟೇಶ್ವರ ಸ್ವಾಮಿಯು ವರದಾತನೆಂದು ವರ್ಣಿತನಾಗಿದ್ದಾನೆ

ಸಂಗಂ ಕಾಲದ ತಮಿಳು ಸಾಹಿತ್ಯದಲ್ಲಿಯೂ ಹಲವಾರು ಕಡೆ ಶ್ರೀ ವೆಂಕಟೇಶ್ವರಸ್ವಾಮಿಯ ಉಲ್ಲೇಖಗಳಿವೆ

ಇಲ್ಲಿನ ಆಲಯದ ಪ್ರಾಚೀನತೆ ಪ್ರಖ್ಯಾತವಾಗಿ, ದಕ್ಷಿಣ ಭಾರತದ ಎಲ್ಲ ಪ್ರಮುಖ ರಾಜರುಗಳೂ ಈ ಆಲಯಕ್ಕೆ ಗೌರವಾದರಗಳಿಂದ ಭಕ್ತಿ ಪ್ರಪತ್ತಿಗಳಿಂದ ನಡೆದುಕೊಂಡಿದ್ದಾರೆ. ಕಂಚಿಯ ಪಲ್ಲವರು (ಕ್ರಿ.ಶ 9 ನೇ ಶತಮಾನ) ಚೋಳ, ಪಾಂಡ್ಯ ವಿಜಯನಗರದರಸರು (14-15 ನೇ ಶತಮಾನ) ಶ್ರೀ ವೆಂಕಟೇಶ್ವರಸ್ವಾಮಿಯ ಭಕ್ತರಾಗಿದ್ದು ಆಲಯಕ್ಕೆ ನಾಮುಂದು ತಾಮುಂದು ಎಂದು ಸ್ಪರ್ಧೆಯಿಂದ ಕಾಣಿಕೆ, ಮಾನ್ಯಗಳನ್ನು, ಸಮರ್ಪಿಸಿದ್ದಾರೆ. ವಿಜಯನಗರದ ಕಾಲದಲ್ಲಿಯಂತೂ ಕಾಣಿಕೆಗಳ ಸುರಿಮಳೆಯೇ ಆಯಿತು. ಅವರ ಸಮರ್ಪಣೆಗಳಿಂದಾಗಿ ಶ್ರೀಕೃಷ್ಣದೇವರಾಯ ಹಾಗೂ ಅವನ ರಾಣಿಯರ ವಿಗ್ರಹಗಳನ್ನು ಅವರು ಜೀವಿಸಿದ್ದ ಕಾಲದಲ್ಲಿಯೇ ಶ್ರೀ ವೆಂಕಟೇಶ್ವರಸ್ವಾಮಿಯ ಆಲಯದ ದ್ವಾರಭಾಗದಲ್ಲಿ ಪ್ರತಿಷ್ಠಾಪಿತವಾಗುವಂತಾಗಿ, ಇವುಗಳನ್ನು ಇಂದಿಗೂ ನೋಡಬಹುದಾಗಿದೆ. ಇತರ ದಾನಿಗಳ ವಿಗ್ರಹಗಳೂ ಕಾಣುತ್ತವೆ. ಶ್ರೀಕೃಷ್ಣದೇವರಾಯನು ತನ್ನ ಆಡಳಿತಕಾಲದಲ್ಲಿ ತನ್ನ ಪತ್ನಿಯರೊಡನೆ ಸೇರಿ ಏಳು ಬಾರಿ ಆಲಯಕ್ಕೆ ಆಗಮಿಸಿದ್ದನು

ವಿಜಯನಗರದ ಅವನತಿಯನಂತರ ದೇಶದ ಎಲ್ಲ ಭಾಗಗಳಿಂದಲೂ ಸಾಮಂತರು ಶ್ರೀಮಂತರು ತಮ್ಮ ಸೇವೆ ಕಾಣಿಕೆಗಳನ್ನು ಆಲಯಕ್ಕೆ ಸಮರ್ಪಿಸತೊಡಗಿದರು. ಮರಾಠರ ಸೇನಾಧಿಪತಿ ರಘೋಜಿ ಭೋಂಸ್ಲೆ ಆಲಯವನ್ನು ಸಂದರ್ಶಿಸಿ ಆಲಯದಲ್ಲಿನ ಪೂಜೆಗಳಿಗಾಗಿ ಶಾಶ್ವತ ವ್ಯವಸ್ಥೆಯಾಗುವಂತೆ ದಾನಗಳನ್ನು ನೀಡಿದ

ಸ್ವಾಮಿಗೆ ಬಹುಮೂಲ್ಯವಾದ ಪಚ್ಚೆಯ ಹಾರವೊಂದನ್ನೂ ಇತರ ಆಭರಣಗಳೊಂದಿಗೆ ಈತನು ಸಮರ್ಪಿಸಿದನು. ಈ ಆಭರಣಗಳನ್ನೆಲ್ಲ ಅವನದೇ



ಬೆಟ್ಟದ ಮೇಲಿನ ಸ್ವಾಮಿ ಆಲಯಗೋಪುರಗಳು, ಆನಂದನಿಲಯ, ಶ್ರೀನಿವಾಸ.


ತಮ್ಮ ಇಬ್ಬರು ರಾಣಿಯರೊಡನೆ ಶ್ರೀಕೃಷ್ಣದೇವರಾಯ.

ಹೆಸರನ್ನು ಹೊಂದಿದ ಸಂಪುಟದಲ್ಲಿಟ್ಟು (ಪೆಟಾರಿ) ಸಂರಕ್ಷಿಸಲಾಗಿದೆ. ನಂತರದ ಕಾಲದಲ್ಲಿ ಮೈಸೂರಿನ ಹಾಗೂ ಗದ್ವಾಲದ ರಾಜರು ಹೆಚ್ಚು ದಾನ ದಕ್ಷಿಣೆಗಳನ್ನು ನೀಡಿದರು

ಹೈಂದವ ರಾಜ್ಯಗಳ ಅವನತಿಯಾಗುತ್ತಿದ್ದಂತೆ ಪ್ರಕಟವಾದ ಮುಸಲ್ಮಾನ, ಆಂಗ್ಲ ರಾಜ್ಯದಲ್ಲಿ ಹಲವಾರು ಆಲಯಗಳು ಅವರ ಆಡಳಿತದಲ್ಲಿ ಸೇರಿ ಹೋದವು. ಹೀಗಾಗಿ ಈಸ್ಟ್ ಇಂಡಿಯಾ ಕಂಪನಿಯ ಮೇಲುಸ್ತುವಾರಿಯಲ್ಲಿದ್ದ ಆಲಯದ ಆಡಳಿತದ ಜವಾಬ್ದಾರಿಯನ್ನು - ಕುಂಪಣಿ ಸರಕಾರ 1843 ರಲ್ಲಿ ಕ್ರಿಸ್ತೇತರ ಧಾರ್ಮಿಕ ಸಂಸ್ಥೆಗಳ ಆಡಳಿತ ಬಿಟ್ಟುಕೊಟ್ಟಾಗ - ತಿರುಮಲೆಯಲ್ಲಿದ್ದ ಹತ್ತೀರಾಮಜೀಮಠದ ಮಹಂತ ಸೇವಾದಾಸಜೀಯವರಿಗೆ ನೀಡಲಾಯಿತು ಹತ್ತೀರಾಮಜೀ ಮಠದ ಮಹಂತರು - ವಿಚಾರಣ ಕರ್ತರು - ಒಂದು ಶತಮಾನದ ಕಾಲ ನೋಡಿಕೊಂಡ ನಂತರ ಆಲಯದ ಆಡಳಿತ 1933 ರಲ್ಲಿ ತಿರುಮಲೆ - ತಿರುಪತಿ ದೇವಸ್ಥಾನಗಳ ಧರ್ಮಕರ್ತರ ಮಂಡಳಿಯ ವಿಶೇಷ ಕಾಯದೆಯನ್ನು ತರುವುದರ ಮೂಲಕ ಮದರಾಸು ಸರ್ಕಾರ ನೇಮಕಾತಿ ಪಡೆದ ಕಮಿಷನರ್ ಈ ಆಲಯದ ಆಡಳಿತವನ್ನು ಧರ್ಮಕರ್ತರ ಮಂಡಳಿಯ ಉಸ್ತುವಾರಿಯಲ್ಲಿ ನೋಡಿಕೊಳ್ಳುವಂತಾಯಿತು ಈ ಮಂಡಳಿಗೆ ಧಾರ್ಮಿಕ ಆಚಾರಗಳಲ್ಲಿ ಒಂದು ಧಾರ್ಮಿಕ ಸಲಹಾ ಮಂಡಳಿಯೂ, ತಿ ತಿ ದೇವಸ್ಥಾನಗಳ ಆಸ್ತಿಪಾಸ್ತಿಗಳ ನಿರ್ವಹಣೆಯ ವಿಚಾರದಲ್ಲಿ ಒಂದು ಆಡಳಿತ ಸಲಹಾ ಮಂಡಳಿಯೂ ನೆರವಿಗೆ ಬರುವಂತಾಯಿತು

ಇಂದು 20 ನೇ ಶತಮಾನದ ಅಂತ್ಯದಲ್ಲಿ (1999) ಹನ್ನೆರಡು ಪ್ರಮುಖ ದೇವಾಲಯಗಳೂ, ಅವುಗಳ ಅಂತರ್ಗತ ಉಪದೇವಾಲಯಗಳೂ ಒಟ್ಟುಗೂಡಿ - ಆಂಧ್ರಪ್ರದೇಶ ಸರ್ಕಾರ 1987 ರಲ್ಲಿ ಹೊರತಂದ 30 ನೇ ಕಾಯದೆಯ ಮೊದಲನೆ ಅನುಸೂಚನೆ 2 ರಂತೆ, ತಿರುಮಲೆ - ತಿರುಪತಿ ದೇವಸ್ಥಾನಗಳೆಂಬ ಒಂದು ಸಂಸ್ಥೆಯಾಗಿದೆ ಕಾರ್ಯನಿರ್ವಹಣಾಧಿಕಾರಿಗಳು ಮುಖ್ಯ ಆಡಳಿತಗಾರರಾಗಿದ್ದಾರೆ ಅವರಿಗೆ ಇಬ್ಬರು ಸಂಯುಕ್ತ ಕಾರ್ಯನಿರ್ವಹಣಾಧಿಕಾರಿಗಳೂ, ಒಬ್ಬ ಆರ್ಥಿಕ ಸಲಹಾದಾರ - ಲೆಕ್ಕಾಧಿಕಾರಿ, ನೆರವಿಗಿದ್ದಾರೆ ಉಪ ಕಾರ್ಯನಿರ್ವಹಣಾಧಿಕಾರಿಗಳು, ಸಂರಕ್ಷಣಾಧಿಕಾರಿಗಳು, ಅರಣ್ಯಾಧಿಕಾರಿಗಳು, ಮುಖ್ಯ ಇಂಜನೀಯರರು - ಮೊದಲಾದವರು ವಿವಿಧ ರಂಗಗಳಲ್ಲಿ ನೆರವಿಗಿದ್ದಾರೆ ಜೊತೆಗೇ ಕಾನೂನು ಅಧಿಕಾರಿ, ಸಂಕ್ಷೇಮ ಅಧಿಕಾರಿ, ಪೌರಸಂಬಂದಾಧಿಕಾರಿ, ಶಿಕ್ಷಣಾಧಿಕಾರಿ, ಮೊದಲಾದವರೂ ಇದ್ದಾರೆ

## ತಿರುಮಲೆ - ಹಾಗೂ ಸ್ವಾಮಿಯ ಬಗೆಗಿನ ಐತಿಹ್ಯಗಳು

ತಿರುಮಲೆಯ ಬಗ್ಗೆಯೂ ಇಲ್ಲಿನ ದೇವರಾದ ಶ್ರೀ ವೆಂಕಟೇಶ್ವರಸ್ವಾಮಿ - ಶ್ರೀನಿವಾಸನ ಬಗ್ಗೆಯೂ ಹಲವಾರು ಐತಿಹ್ಯಗಳುಂಟು ಇವೆಲ್ಲವೂ ಪುರಾಣೋಕ್ತವಾಗಿವೆ ಇವೆಲ್ಲವನ್ನೂ ಸೇರಿಸಿ ಶ್ರೀ ವೆಂಕಟಾಚಲ ಮಹಾತ್ಮ್ಯವೆಂಬ ಪುಸ್ತಕದಲ್ಲಿ ಸಂಗ್ರಹಿಸಲಾಗಿದೆ ಪ್ರಾಚೀನ ಕಾಲದ ಒಂದು ಶಾಸನವು ಶ್ರೀ ವೆಂಕಟಾಚಲ ಮಾಹಾತ್ಮ್ಯವನ್ನು ಸ್ವಾಮಿಯ ಮುಂದೆ ಪಠಿಸಲಾಗುತ್ತಿತ್ತು ಎಂದು ತಿಳಿಸುತ್ತದೆ ಈಗ ಮುದ್ರಿತವಾಗಿ ದೊರೆಯುವ ಪುಸ್ತಕರೂಪದ ಶ್ರೀ ವೆಂಕಟಾಚಲಮಾಹಾತ್ಮ್ಯವೇ ಶಾಸನದಲ್ಲಿ ಹೇಳಲಾಗಿರುವ ಕೃತಿ ಎಂಬ ವಿಷಯ ಸ್ಪಷ್ಟವಾಗಿಲ್ಲ ಮುದ್ರಿತ ಪುಸ್ತಕದಲ್ಲಿ ವರಾಹಪುರಾಣ, ಪದ್ಮಪುರಾಣ, ಗರುಡಪುರಾಣ, ಬ್ರಹ್ಮಾಂಡಪುರಾಣ, ಮಾರ್ಕಂಡೇಯ ಪುರಾಣ, ಹರಿವಂಶ ಪುರಾಣ, ವಾಮನಪುರಾಣ, ಬ್ರಹ್ಮಪುರಾಣ ಬ್ರಹ್ಮೋತ್ತರಪುರಾಣ, ಆದಿತ್ಯಪುರಾಣ, ಸ್ಕಂದಪುರಾಣ, ಭವಿಷ್ಯೋತ್ತರ ಪುರಾಣಗಳ ಕಥೆಗಳನ್ನು ಸಂಗ್ರಹಿಸಲಾಗಿದೆ ಇವುಗಳಲ್ಲಿನ ಬಹುತೇಕ ಉಲ್ಲೇಖಗಳು ತಿರುಮಲೆಯ ಪಾವಿತ್ರ್ಯವನ್ನೂ, ಅದರಲ್ಲಿನ ತೀರ್ಥಗಳನ್ನೂ ವಿವರಿಸುತ್ತವೆ ವೆಂಕಟಾಚಲ ಮಾಹಾತ್ಮ್ಯದಲ್ಲಿ ಪ್ರಸಿದ್ಧ ಪಡಿಸಲಾಗಿರುವ, ತಿರುಮಲೆಯಲ್ಲಿ ಸ್ವಾಮಿ ಆವಿರ್ಭವಿಸುವ ವಿಷಯ ತಿಳಿಸುವ ಕೆಳಗಿನ ಅಂಶಗಳು ವಿಶೇಷ ಗಮನಾರ್ಹವಾಗಿವೆ

## ಸ್ವಾಮಿಯ ಆವಿರ್ಭಾವ

ತಿರುಮಲೆಯಲ್ಲಿ ಶ್ರೀನಿವಾಸನು ನೆಲೆಸಿದ ಕಾರಣವನ್ನು ವಿವರಿಸುವ ಎರಡು ಕಥೆಗಳು ಪ್ರಸಿದ್ಧವಾಗಿವೆ-

ಒಮ್ಮೆ ವೈಕುಂಠದ ಹೊರಗೆ ಎಲ್ಲಿಯಾದರೂ ಇರಬೇಕೆಂದು ವಿಷ್ಣುವಿಗೆ ಅನ್ನಿಸಿತು ಆತ ನಾರದರನ್ನು ಸಲಹೆ ಕೇಳಿದ ತನ್ನ ಕ್ರೀಡಾಲೀಲೆಗಾಗಿ ತಕ್ಕ ಸ್ಥಳವನ್ನು ಭೂಮಿಯ ಮೇಲೆ ಸೂಚಿಸುವಂತೆ ನಾರದರನ್ನು ಕೇಳಿದಾಗ ನಾರದರು ನಂತರದ ಕಾಲದಲ್ಲಿ ಶೇಷಾಚಲ ಪ್ರಕಟವಾಗುವ ಸ್ಥಳವನ್ನು ನಿರ್ದೇಶಿಸಿದರು ಆ ಮೇಲೆ ವಾಯು ಶೇಷರು ತಮ್ಮ ಶಕ್ತಿಯ ಬಗ್ಗೆ ಪಂಥ ಹೂಡಿ, ಶೇಷನು ಮೇರು ಪರ್ವತವನ್ನು ಸುತ್ತಿಕೊಂಡು ಪರ್ವತವನ್ನು ಕದಲಿಸುವಂತೆ ವಾಯುವಿಗೆ ಪಂಥಾಹ್ವಾನ ನೀಡಿದ ವಾಯುವು ತನ್ನೆಲ್ಲ ಬಲವನ್ನು ಪ್ರಯೋಗಿಸಿದರೂ ಪರ್ವತ ಕದಲಲಿಲ್ಲ ಶೇಷನು ಉಸಿರಾಡಲು ಬಾಯಿ ತೆರೆದಾಗ ವಾಯುವು ಒಳ ಸೇರಿ ಪರ್ವತವನ್ನು ಹಾರುವಂತೆ ಮಾಡಿದ ಮಧ್ಯದಲ್ಲಿ ಮೇರುವು ವಾಯುವನ್ನು ಬಿಟ್ಟು ಬಿಡುವಂತೆ ಕೇಳಿಕೊಂಡಾಗ ವಾಯುವು ತನ್ನ ಹಿಡಿತವನ್ನು ಬಿಟ್ಟನು ಅವಮಾನಿತನಾದ ಶೇಷನು ಪಶ್ಚಾತ್ತಾಪ ಪಟ್ಟು ವಿಷ್ಣುವನ್ನು ಕುರಿತು ತಪಸ್ಸು ಮಾಡಿದ ವಿಷ್ಣುವು ಪ್ರತ್ಯಕ್ಷನಾಗಿ ವರವನ್ನು ನೀಡಲು ಮುಂದಾದ ಶೇಷನು ಪರ್ವತರೂಪ ಧಾರಣೆ ಮಾಡಿ ತನ್ನ ತಲೆಯಲ್ಲಿ - ಹೆಡೆಯಲ್ಲಿ - ವಿಷ್ಣುವನ್ನು ನೆಲೆಸಲು ಬೇಡಿದನು ಈ ಪರ್ವತವನ್ನು ಶೇಷಾಚಲವೆಂದು ಹೆಸರಿಸಲು ಬೇಡಿದ ಈ ಹಿಂದೆ ನಾರದರ ಸಲಹೆಯನ್ನು ನೆನಪಿಗೆ ತಂದುಕೊಂಡ ವಿಷ್ಣುವು ತಥಾಸ್ತು ಎಂದ ಈ ಕಥೆ ಬ್ರಹ್ಮಪುರಾಣದಲ್ಲಿ ಬರುತ್ತದೆ

ಭವಿಷ್ಯೋತ್ತರಪುರಾಣದ ಪ್ರಕಾರವಾದ ಮತ್ತೊಂದು ಕಥೆ ಹೀಗಿದೆ ಒಂದೊಮ್ಮೆ ಗಂಗಾನದಿಯ ದಡದಲ್ಲಿ ಸಮಾವೇಶಗೊಂಡ ಋಷಿಗಳು ಯಜ್ಞವೊಂದನ್ನು ಮಾಡಲು ತೀರ್ಮಾನಿಸಿ ಸಿದ್ಧತೆಗಳನ್ನು ನಡೆಸಿದರು ಅವರನ್ನು ಸಂದರ್ಶಿಸಿದ ನಾರದರು ಯಾವ ದೇವರ ಪ್ರೀತ್ಯರ್ಥವಾದ ಯಜ್ಞವೆಂದು ವಿಚಾರಿಸಿದರು ಸಮಸ್ಯೆಯನ್ನು ಬಿಡಿಸಲಾಗದ ಋಷಿಗಳು ಭೃಗುಮಹರ್ಷಿಯನ್ನು ಸಮಸ್ಯಾ ಪರಿಹಾರಕ್ಕೆ ಪ್ರಾರ್ಥಿಸಿದರು ಭೃಗುವು ಮೂವರೂ ಪರಮ ಪುರುಷರನ್ನು ಪರೀಕ್ಷಿಸಿ ಸಮಸ್ಯಾಪರಿಹಾರಕ್ಕೆ ಹೊರಟರು ಮೊದಲು ಬ್ರಹ್ಮ ಲೋಕಕ್ಕೆ ಹೋಗಿ ನೋಡಿದರೆ ಬ್ರಹ್ಮನು ವೇದ ಪ್ರವಚನದಲ್ಲಿ



ಶ್ರೀ ಗೋವಿಂದರಾಜ ಸ್ವಾಮಿ ಪುಷ್ಕರಿಣಿ.
ಹಿನ್ನೆಲೆಯಲ್ಲಿ ದ್ವಾರಗೋಪುರ

ತೊಡಗಿ ಭೃಗುವನ್ನು ಗಮನಿಸಲಿಲ್ಲ ಭೃಗುವು ನಂತರ ಕೈಲಾಸಕ್ಕೆ ಹೋಗಿ ನೋಡಿದರೆ ಶಿವನು ಪಾರ್ವತಿಯೊಡನೆ ಆನಂದ ತಾಂಡವ ನೃತ್ಯದಲ್ಲಿ ತೊಡಗಿದ್ದು, ಭೃಗುವಿನ ಆಗಮನವನ್ನು ಗಮನಿಸಲಿಲ್ಲ ಭೃಗುವು ವೈಕುಂಠವನ್ನು ತಲುಪಿ ಲಕ್ಷ್ಮಿಯೊಡನಿದ್ದ ವಿಷ್ಣುವನ್ನು ಕಂಡರು ತಮ್ಮನ್ನು ಗಮನಿಸದ ವಿಷ್ಣುವಿನ ವಕ್ಷಃಸ್ಥಲವನ್ನು ಭೃಗುವು ಕೋಪದಿಂದ ಒದ್ದುಬಿಟ್ಟರು ವಿಷ್ಣುವು ಪಶ್ಚಾತ್ತಾಪ ಪಟ್ಟವನಂತೆ ಭೃಗುವನ್ನು ಆದರಿಸಿದ ಇದರಿಂದ ಸಂತುಷ್ಟನಾದ ಭೃಗುವು ಭೂಲೋಕಕ್ಕೆ ಹಿಂದಿರುಗಿ ವಿಷ್ಣುವೇ ತ್ರಿಮೂರ್ತಿಗಳಲ್ಲಿ ಶ್ರೇಷ್ಠವೆಂದೂ ಯಜ್ಞವನ್ನು ಅವನಿಗೇ ಒಪ್ಪಿಸದೇಕೆಂದೂ ತೀರ್ಪು ಹೇಳಿದರು ಇತ್ತ ಎದೆಯನ್ನು ಒದ್ದರೂ ಭೃಗುವಿನಲ್ಲಿ ವಿನಯವನ್ನು ಪ್ರದರ್ಶಿಸಿದ ವಿಷ್ಣುವಿನ ಬಗ್ಗೆ ಅಸಮಾಧಾನ ಹೊಂದಿದ ಲಕ್ಷ್ಮಿ ವೈಕುಂಠವನ್ನು ಬಿಟ್ಟು ಕರವೀರ ಪುರಕ್ಕೆ (ಕೊಲ್ಹಾಪುರ) ಹೊರಟು ಹೋದಳು ಲಕ್ಷ್ಮಿಯಿಂದ ದೂರನಾದ ವಿಷ್ಣುವು ವೈಕುಂಠವನ್ನು ತ್ಯಜಿಸಿ ತಿರುಗಾಡುತ್ತ ಶೇಷಾಚಲಕ್ಕೆ ಆಗಮಿಸಿ ಅಲ್ಲಿನ ಸೌಂದರ್ಯದಿಂದ ಆಕರ್ಷಿತನಾಗಿ ಅಲ್ಲಿನ ಒಂದು ಸ್ವಾಮಿಪುಷ್ಕರಿಣೀ ತೀರದ ಹುತ್ತದಲ್ಲಿ ನೆಲೆಸಿದ

## ಸ್ಥಳೀಯ ದೇವಾಲಯಗಳು ತಿರುಪತಿ :

ಆಂಧ್ರಪ್ರದೇಶದ ಚಿತ್ತೂರು ಜಿಲ್ಲೆಯಲ್ಲಿರುವ ತಿರುಪತಿ ತಿರುಮಲೆ ಬೆಟ್ಟಗಳ ತಪ್ಪಲಿನಲ್ಲಿರುವ ನಗರ ಶ್ರೀವೈಷ್ಣವ ಆಚಾರ್ಯರಾದ ರಾಮಾನುಜಾಚಾರ್ಯರೊಡನ ಸಂಬಂಧ ಹೊಂದಿರುವ ಕ್ಷೇತ್ರ

ಶ್ರೀವೈಷ್ಣವ ಆಚಾರ್ಯರಾದ ಭಗವದ್ರಾಮಾನುಜರು ಕ್ರಿಶ 1130 ರಲ್ಲಿ ಶ್ರೀ ಗೋವಿಂದರಾಜಸ್ವಾಮಿ ಆಲಯವನ್ನು ನೆಲಗೊಳಿಸಿ ಅದರಸುತ್ತ ಒಂದು ಸಣ್ಣ ಹಳ್ಳಿಯನ್ನು ನಿರ್ಮಿಸಿದರು (ಇದನ್ನೇ ಇಂದಿಗೂ ಕನ್ನಡಿಗರು ಗೋವಿಂದರಾಜ ಪಟ್ಟಣವೆಂದು ಗುರುತಿಸುತ್ತಾರೆ) ಅದನ್ನು ತಿರುಪತಿ ಎಂದು ಕರದರು ತಿರುಪತಿಯ ದೇರ ದೇರ ಕಡ ಶ್ರೀ ಕೋದಂಡರಾಮಸ್ವಾಮಿ ಆಲಯ, ಕಪಿಲೇಶ್ವರತೀರ್ಥ, ನರಸಿಂಹಸ್ವಾಮಿ ಆಲಯ ಮೊದಲಾದ ಹತ್ತು ಹಲವು ಗುಡಿಗಳು ತಲೆಯೆತ್ತಿದವು. ತಿರುಮಲ - ತಿರುಪತಿ ದೇವಸ್ಥಾನದವರು ಯಾತ್ರಿಕರ ಅನುಕೂಲಕ್ಕಾಗಿ ಕಲ್ಪಿಸಿದ ಅನೇಕ ಸೌಕರ್ಯಗಳಿಂದಾಗಿ ನಗರ ಬೆಳೆದಿದ

## ಶ್ರೀ ಗೋವಿಂದರಾಜಸ್ವಾಮಿ ಆಲಯ :

ಕ್ರಿಶ 1130 ರಲ್ಲಿ ಭಗವದ್ರಾಮಾನುಜರಿಂದ ಸ್ಥಾಪಿತವಾದ ಆಲಯ ಇದು ಜನ ಜನಿತ ಕಥೆಯಂತೆ ಶ್ರೀ ಗೋವಿಂದರಾಜಸ್ವಾಮಿ ಶ್ರೀ ವೆಂಕಟೇಶ್ವರಸ್ವಾಮಿಯ ಅಣ್ಣ ಶ್ರೀ ಗೋವಿಂದರಾಜಸ್ವಾಮಿಯ ಮೂಲಮೂರ್ತಿ ಶಯನ ಭಂಗಿಯಲ್ಲಿದ್ದು ತಲೆಯ ಕೆಳಗೆ ಕೊಳಗವನ್ನು ದಿಂಬಿನಂತೆ ಇಡಲಾಗಿದೆ ಪದ್ಮಾವತೀ ಶ್ರೀನಿವಾಸರ ಕಲ್ಯಾಣದ ವೆಚ್ಚಗಳಿಗಾಗಿ ಕುಬೇರ ನಿಂದ ಪಡೆದ ಸಾಲದ ಹಣವನ್ನು ಹಿಂದಿರುಗಿಸುವಲ್ಲಿ ಗೋವಿಂದರಾಜಸ್ವಾಮಿ ಕೊಳಗದಿಂದ ಬೆಳ್ಳಿ ಬಂಗಾರಗಳನ್ನು ಅಳೆಯಲು ಪ್ರಯತ್ನಿಸಿದನೆಂದು ಹೇಳಲಾಗಿದೆ ಆಲಯದ ಮುಖ್ಯ ದ್ವಾರಗೋಪುರವನ್ನು ವಿಜಯನಗರದ ಸಾಮಂತ ರಾಜ ಮಟ್ಲಕುಮಾರ ಅನಂತರಾಯನು ನಿರ್ಮಿಸಿದ ಶ್ರೀ ಗೋವಿಂದರಾಜಸ್ವಾಮಿಯ ಆಲಯದಲ್ಲಿ ಪಾರ್ಥಸಾರಥಿ, ಆಂಡಾಳ್, ರಾಮಾನುಜ ಮೊದಲಾದವರ ಹಲವು ಉಪ ಆಲಯಗಳು ಇವೆ.

## ಅಲಮೇಲು ಮಂಗಾಪುರ :

ತಿರುಪತಿಯಿಂದ ಐದು ಕಿಲೋಮೀಟರ್ ದೂರದಲ್ಲಿರುವ ಅಲಮೇಲು ಮಂಗಾಪುರ - ತಿರುಚಾನೂರು-ಮತ್ತೊಂದು ಪುಣ್ಯಕ್ಷೇತ್ರ ಶ್ರೀ ವೆಂಕಟೇಶ್ವರಸ್ವಾಮಿಯ ಪತ್ನಿ ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ ಇಲ್ಲಿದೆ ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿಯ ದರ್ಶನಕ್ಕಾಗಿ ಮಾಡುವ ಯಾತ್ರೆ ತಿರುಚಾನೂರಿನಲ್ಲಿ ಅಮ್ಮನವರನ್ನು ಕಂಡ ಮೇಲೆಯೇ ಪೂರ್ಣವಾಗುವುದೆಂದು ಪರಂಪರೆ ಹೀಗಾಗಿ ತಿರುಮಲೆ ತಿರುಪತಿಗಳಲ್ಲಿ ಆಲಯಗಳನ್ನು ದರ್ಶಿಸಿದ ನಂತರ ಯಾತ್ರಿಕರು ತಿರುಚಾನೂರಿಗೆ ಅಮ್ಮನವರನ್ನು ಕಾಣಲು ಹೊರಡುವುದು ರೂಢಿಗತವಾಗಿ ನಡೆದಿದೆ ಪದ್ಮಾವತೀದೇವಿ ಆಲಯದ ಬದಿಯಲ್ಲಿರುವ ಪುಷ್ಕರಿಣಿಯನ್ನು ಪದ್ಮ



ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ಆಲಯ - ಚಿನ್ನದ ವಿಮಾನ



## ತಿರುಮಲೆ ತಿರುಪತಿ ದೇವಸ್ಥಾನಗಳು - ತಿರುಪತಿ

# ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆ

**ಒಂದು ವಿನಂತಿ;**

ಸಸಿಯೊಂದ ಬೆಳೆವವನು ದೇವರಾ ಸೇವಕನು
ತಲೆಮಾರು ಗಳಿಗೆಲ್ಲ ನೆರಳಿನವ ಹರಿಸುವನು
ಹರಸುವರು ಜನರವನ, ಅವನೆಂದು ಕಾಣದರು

ತಿರುಮಲೆಯ ಪವಿತ್ರವಾದ ಅರಣ್ಯ ಶ್ರೀ ವೆಂಕಟೇಶ್ವರಸ್ವಾಮಿಯು ಮಾನವ ಜನಾಂಗಕ್ಕೆ ನೀಡಿದ ಅಮೂಲ್ಯ ವರದಾನ ಈ ಒಂದು ಸೂಕ್ಷ್ಮವೂ ಸುಂದರವೂ ಆದ ಅರಣ್ಯ ಪರಿಸರ ರಕ್ಷಣೆ ಮಾಡಲೆಂದು ತಿರುಮಲೆ - ತಿರುಪತಿ ದೇವಸ್ಥಾನಗಳವರು ಉತ್ತಮವಾದ ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆಯನ್ನು ಆರಂಭಿಸಿದ್ದಾರೆ ಈ ವನಾಭಿವೃದ್ಧಿಯೋಜನೆಯ ಹಲವು ವಿವರಗಳು ಹೀಗೆ ಇವೆ

## ವೃಕ್ಷ ಸಂವರ್ಧನೆ

ಈ ಯೋಜನೆಯನ್ವಯ ಪವಿತ್ರವಾದ ಸಪ್ತಗಿರಿಗಳಲ್ಲಿ ಐದುನೂರು ಗಿಡಗಳನ್ನು ನೆಡಲಾಗುವುದು

ಪ್ರಯೋಜನಗಳು
* ಗಿಡಗಳ ಈ ತೋಪಿಗೆ ದಾನಿಯು ಅಪೇಕ್ಷಿಸಿದ ಹೆಸರನ್ನಿಡಲಾಗುವುದು
* ಗಿಡಗಳನ್ನು ಐದುವರ್ಷಗಳ ವರೆಗೆ ಆರೈಕೆ ಮಾಡಿ ನೋಡಿಕೊಳ್ಳಲಾಗುವುದು
* ನೂರು ಶತಾಂಶ ಆದಾಯಕರ ಮುಕ್ತವಾದದ್ದು ಈ ದಾನ

ದಾನದ ಮೊಬಲಗು **ರೂ. 25000.**

## ವೃಕ್ಷ ಪ್ರಸಾದ

ಈ ಯೋಜನೆಯನ್ವಯ ತಿರುಮಲೆಯಲ್ಲಿ ಪ್ರತಿವರ್ಷವೂ ನೂರು ಹೂ ಹಣ್ಣು ಬಿಡುವ ಗಿಡಗಳನ್ನು ಬೆಳೆಸಲಾಗುವುದು

ಪ್ರಯೋಜನಗಳು
* ಪ್ರತಿವರ್ಷ ದಾನಿಯ ಹೆಸರಿನಲ್ಲಿ ನೂರು ಹೂ ಹಣ್ಣು ಬೆಳೆಯುವ ಗಿಡಗಳನ್ನು ವಿತರಿಸುವುದು
* ಹತ್ತು ವರ್ಷಗಳವರೆಗೆ ಪ್ರತಿವರ್ಷ ಹಂಚುವಿಕೆ
* ನೂರು ಶತಾಂಶ ಆದಾಯಕರ ಮುಕ್ತವಾದದ್ದು ಈ ದಾನ

ದಾನದ ಮೊಬಲಗು **ರೂ. 15000.**

## ಸ್ಮಾರಕ ವನಗಳು

ಈ ಯೋಜನೆಯಡಿಯಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯ ಸಪ್ತಗಿರಿಗಳಲ್ಲಿ ಯಾವುದಾದರೂ ಒಂದು ಜಾತಿಯ ಹತ್ತು ಗಿಡಗಳನ್ನು ಒಂದು ಕಡೆ ನೆಟ್ಟು ಐದು ವರ್ಷ ಬೆಳೆಸಲಾಗುವುದು

ಪ್ರಯೋಜನಗಳು
* ತೋಪಿಗೆ ದಾನಿಯ ಹೆಸರನ್ನಿಡಲಾಗುವುದು
* ಗಿಡಗಳನ್ನು ಐದು ವರ್ಷ ಆರೈಕೆಯಿಂದ ನೋಡಿಕೊಳ್ಳಲಾಗುವುದು
* ಈ ಮೊತ್ತದ ದಾನವು ನೂರು ಶತಾಂಶ ಆದಾಯಕರ ಮುಕ್ತ

ದಾನದ ಮೊಬಲಗು **ರೂ. 5000.**

## ವನ ಸಂರಕ್ಷಣ ಭಾಗಸ್ವಾಮ್ಯ

ತಿರುಮಲೆಯ ಅರಣ್ಯಾಚ್ಛಾದನೆಯನ್ನು ರಕ್ಷಿಸಿ ಬೆಳೆಸುವ ಯೋಜನೆಯಿದು

ಪ್ರಯೋಜನಗಳು
* ದಾನಿಯ ಹೆಸರಿನ ಪ್ರಕಟನೆ
* ನೂರು ಶತಾಂಶ ಆದಾಯಕರ ಮುಕ್ತದಾದದ್ದು ಈ ದಾನ

ದಾನದ ಮೊಬಲಗು **ರೂ. 2000.**

ತಮ್ಮ ದಾನಗಳನ್ನು ಕಾರ್ಯನಿರ್ವಹಣಾಧಿಕಾರಿ ತಿ ತಿ ದೇ ತಿರುಪತಿ - ಇವರ ಹೆಸರಿಗೆ ಡಿ ಡಿ ಯ ರೂಪದಲ್ಲಿ ಕಳುಹಿಸಿ

**ಕಾರ್ಯನಿರ್ವಹಣಾಧಿಕಾರಿ.**

* * * * *

ತಿರುಚಾನೂರು ಶ್ರೀ ಪದ್ಮಸರೋವರ ಪಂಚಮಿತೀರ್ಥದಂದು



ಶ್ರೀನಿವಾಸ ಮಂಗಾಪುರದ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯ

ಸರೋವರವೆನ್ನುವರು ಪರಂಪರೆಯ ಕಥೆಯಂತೆ ಇಲ್ಲಿನ ಸರೋವರದ ಕಮಲದಲ್ಲಿ ದೇವಿಯು ಆವಿರ್ಭವಿಸಿದಳು

## ಶ್ರೀನಿವಾಸ ಮಂಗಾಪುರ :

ತಿರುಪತಿಯ ಪಶ್ಚಿಮಕ್ಕೆ ಸುಮಾರು 12 ಕಿಲೋಮೀಟರ್ ದೂರದಲ್ಲಿರುವ ಶ್ರೀನಿವಾಸ ಮಂಗಾಪುರದಲ್ಲಿ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯವಿದೆ ಪರಂಪರೆಯ ಕಥಯಂತೆ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಹೊರಡುವ ಮೊದಲು ಸ್ವಾಮಿಯು ಕುಟುಂಬ ಮೊಡನೆ ಇಲ್ಲಿ ಸ್ವಲ್ಪ ಕಾಲವಿದ್ದನಂತ ಚಂದ್ರಗಿರಿಯ ಬಳಿಯಿರುವ ಈ ಸ್ಥಳಕ್ಕೆ ವಾಹನ ಸೌಕರ್ಯ ಉಂಟು

## ನಾರಾಯಣ ವನಂ :

ತಿರುಪತಿಯ ಆಗ್ನೇಯದಲ್ಲಿ ಪುತ್ತೂರು ಮದ್ರಾಸು ಮಾರ್ಗದಲ್ಲಿ ತಿರುಪತಿಯಿಂದ 22 ಕಿ ಮೀ ದೂರದಲ್ಲಿದೆ ಪುರಾಣಗಳ ಪ್ರಕಾರ ವೆಂಕಟೇಶ್ವಸ್ವಾಮಿಯು ಪದ್ಮಾವತಿಯನ್ನು ಇಲ್ಲಿಯೇ ವಿವಾಹವಾದನು ಈ ವಿವಾಹದ ನೆನಪಿನಲ್ಲಿ ಪದ್ಮಾವತಿಯ ತಂದೆ ಆಕಾಶರಾಜನು ಈ ಆಲಯವನ್ನು ನಿರ್ಮಿದನು



ನಾಗುಲಾಪುರಂ ಶ್ರೀ ವೇದನಾರಾಯಣಸ್ವಾಮಿ ಆಲಯ



ಅಪ್ಪಲಾಯಗುಂಟ ಶ್ರೀ ಪ್ರಸನ್ನ ವೇಂಕಟೇಶ್ವರಸ್ವಾಮಿಯ ಆಲಯ

## ನಾಗುಲಾಪುರಂ :

ತಿರುಪತಿಯ ಆಗ್ನೇಯದಲ್ಲಿ ಪುತ್ತೂರು - ಮದರಾಸು ರಸ್ತೆಯಲ್ಲಿ ನಗರಿಯ ಬಳಿಯಲ್ಲಿ ತಿರುಪತಿಯಿಂದ 65 ಕಿ ಮಿ ದೂರದಲ್ಲಿರುವ ಊರು ಇದು ಇದರ ಆಕರ್ಷಣೆಯ ಕೇಂದ್ರಬಿಂದುವೆಂದರೆ ವಿಜಯನಗರ ವಾಸ್ತುಶಿಲ್ಪದ ಅತ್ಯುತ್ತಮ ನಮೂನೆಯಾದ ಶ್ರೀ ವೇದನಾರಾಯಣಸ್ವಾಮಿ ಆಲಯ ಆಲಯದ ಗರ್ಭಗುಡಿಯಲ್ಲಿ ಶ್ರೀದೇವಿ ಭೂದೇವಿಯರಿಂದ ಕೂಡಿದ ವಿಷ್ಣುವಿನ ಮತ್ಸ್ಯಾವತಾರದ ಮೂರ್ತಿ ಪೂಜೆಗೊಳ್ಳುತ್ತದೆ

ಇಲ್ಲಿನ ಆಲಯದ ಪ್ರಾಮುಖ್ಯತೆ ಎಂದರೆ ಸೂರ್ಯನು ಮಾಡುವ ಉಪಾಸನೆ ಪ್ರತಿ ವರ್ಷದ ಮಾರ್ಚ್‌ತಿಂಗಳಿನಲ್ಲಿ ಮೂರುದಿನಗಳ ಕಾಲ ಸೂರ್ಯ ರಶ್ಮಿಗಳು ಮಹಾದ್ವಾರ ಗೋಪುರದ ಒಳಗಿನಿಂದ ಹಾದು ಗರ್ಭಗುಡಿಯಲ್ಲಿನ ಸ್ವಾಮಿಯ ಮೇಲೆ ಬೀಳುತ್ತವೆ ಈ ಬೆಳಕಿನ ಲಾಸ್ಯವನ್ನು ಸೂರ್ಯೋಪಾಸನೆಯೆನ್ನಲಾಗಿದೆ ಆಲಯವನ್ನು ಜೀರ್ಣೋದ್ಧಾರ ಮಾಡಿ ಸುತ್ತಲೂ ನಗರವನ್ನು ನಿರ್ಮಿಸಿ ಅದಕ್ಕೆ ತನ್ನ ತಾಯಿಯ ಹೆಸರನ್ನಿಟ್ಟು ನಾಗುಲಾಪುರವೆಂದು ಕರೆದದ್ದು ವಿಜಯನಗರದ ಶ್ರೀಕೃಷ್ಣದೇವರಾಯ

## ಕಾರ್ವೇಟಿನಗರ :

ತಿರುಪತಿಯಿಂದ 58 ಕಿ ಮಿ ದೂರದಲ್ಲಿ ಪುತ್ತೂರಿನ ಬಳಿ ಇರುವ ಪುಣ್ಯಕ್ಷೇತ್ರವಿದು ರುಕ್ಮಿಣೀ ಸತ್ಯಭಾಮೆಯರೊಡನೆ ಇರುವ ವೇಣುಗೋಪಾಲಸ್ವಾಮಿ ಇಲ್ಲಿನ ದೈವ ಪ್ರಾಚೀನ ಕಾಲದಲ್ಲಿ ನಾರಾಯಣವನಂ ರಾಜರುಗಳಿಂದ ಈ ಆಲಯ ನೋಡಲ್ಪಡುತ್ತಿದ್ದಿತು ಸೀತಾ ರಾಮಲಕ್ಷ್ಮಣ ಆಂಜನೇಯರ ಏಕ ಶಿಲಾ ವಿಗ್ರಹವನ್ನೂ ಇಲ್ಲಿ ನೋಡಬಹುದು

## ಅಪ್ಪಲಾಯಗುಂಟ :

ತಿರುಪತಿಯಿಂದ 15 ಕಿ ಮೀ ದೂರದಲ್ಲಿರುವ ಅಪ್ಪಲಾಯಗುಂಟದಲ್ಲಿ ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಆಲಯವಿದೆ ಇಲ್ಲಿ ಬ್ರಹ್ಮೋತ್ಸವ ತೆಪ್ಪೋತ್ಸವ ಮೊದಲಾದ ಉತ್ಸವಗಳನ್ನು ವೈಭವದಿಂದ ನಡೆಸಲಾಗುತ್ತದೆ ಈ ಪ್ರಾಚೀನ ಆಲಯದಲ್ಲಿ ಪದ್ಮಾವತೀದೇವಿ, ಆಂಡಾಳ್ ವಿಗ್ರಹಗಳೂ ಉಂಟು ಕಾರ್ವೇಟಿನಗರದ ರಾಜರಿಂದ ನಿರ್ಮಿತವಾದ ಆಲಯದಲ್ಲಿ ಒಂದು ಆಂಜನೇಯನ ಗುಡಿಯೂ ಉಂಟು ದೀರ್ಘಕಾಲದ ರೋಗ ರುಜಿನಗಳಿಗೆ ಈ ಹನುಮಂತನ ಪೂಜೆ ಭೇಷಜವೆಂದು ನಂಬಲಾಗಿದೆ

# ಪಾದುಕಾ ಪಟ್ಟಾಭಿಷೇಕ

- ಕಡಬಂ ದೊರೆಸ್ವಾಮಿ ಅಯ್ಯಂಗಾರ್.

ನಗರದೊಳು ನಿಜಮಾತೆಯರ ನೆಲೆಗೊಳಿಸಿ ಭರತ
ಕಟ್ಟುಮ್ಮಳದ ಬಿಗುಹಿನೊಳು ಸಿಲುಕಿ, ಗುರುಗಳ್ಗೆ
ನುಡಿದನೀ ಕೆಚ್ಚುನುಡಿ ಯೊಚ್ಚತವ - ಆಚಾರ್ಯ
ಮನ್ನೆಯರೆ! ನಂದಿಗ್ರಾಮದೊಳಿನ್ನು ನೆಲಸುವೆನು
ನೀಡಿಮೆನಗಪ್ಪಣೆಯ, ರಾಮ ವಿರಹ ವಿಶಾಲ
ಖೇದವನು ಸಹಿಸುವೆನು ನಿಷ್ಠೆಯಿಂದಾಚರಿಸಿ
ಏಕಾಕಿ ಜೀವನವ, ಪಿತನತ್ತ ತೆರಳಿದನು
ಸಗ್ಗಕ್ಕೆ ತೆರಳಿದ ನಣ್ಣನಿತ್ತ ಕಾನನಕೆ
ಶ್ರೀರಾಮನಿನ್ನೆಂದು ವನದಿಂದ ಬಂದಪನೊ?
ರಾಮನಿಂ ಪೆರರುಂಟೆ ರಾಜ್ಯರಥವೆಸಗಲ್ಕೆ? ೧೦

ಕೋಸಲಾಧಿಪತ್ಯಕಧಿರಾಜನವನೆ ಕಣಾ
ಮಹಾಮತಿ ಭರತ ನಿಂತೊರೆದುದನವಧರಿಸಿ ವರ
ಮುನಿ ವಸಿಷ್ಠರೆಂದರು, ಭರತ ನೀನಾಡಿರುವೆ
ಶುಭ ವಂಶೋನ್ನತಿಯ ನುಡಿ ಮುತ್ತುಗಳ, ಮೆಚ್ಚಿದೆವು
ಪೇಳ್, ನಿನ್ನವೊಲಾರುಂಟು ಭ್ರಾತೃವಾತ್ಸಲ್ಯ
ನಿರ್ಭರರು? ಸೋದರಿಕೆ ಸೌಹಾರ್ದ ಸರ್ವಗುಣ
ಸಂಪನ್ನ ನೀನಯ್ಯ, ಮೆಚ್ಚದವರಿನ್ನಾರು
ನಿನ್ನಾರ್ಯ ಮಾರ್ಗವನು? ಕಾಣುವೆವೆ ನಿನ್ನಂಥ
ಪರಿಪಕ್ವ ಹೃದಯನನು?
ಇಂತೆಂದ ಮುನಿವರರ
ವಚನಗಳ ನವಧರಿಸಿ ದೆಸಸಿದನು ಸೂತಂಗೆ ೨೦

ನಿಜರದವ ತಾರೆಂದು, ಮುಖತಾಮರಸ ಬಿರಿಯೆ
ಮಾತೆಯರ ಪದಕೆರಗಿ ಶತ್ರುಘ್ನನೊಡಗೂಡಿ
ಬರತ ರಥವನಡರಿದನು, ಮಂತ್ರಿಪುರೋಹಿತರು
ದೆಂಬಿಡಿದು ಬರುತಿರಲು ಪೂರ್ವಾಭಿಮುಖವಾಗಿ,
ತೆರಳಿದುದು ವರವಿಪ್ರ ಗಣಮಂದು ವಾಸಿಷ್ಠ
ಮುನಿವರನ ಮುಂದಿಟ್ಟು, ಕರಿತುರಗ ರದಪತ್ತಿ
ಸೇನೆಗಳು ನಡೆದು ಬಂದುವು ಪೌರರೊಗ್ಗಿನಲಿ
ಭ್ರಾತೃಸಾರನಿಧಿ ಧರ್ಮಾತ್ಮನಾ ಭರತ
ರದವಡರಿ ಕುಳ್ಳಿರ್ದು ಶ್ರೀರಾಮ ಪಾದುಗಳ
ತನ್ನುತ್ತಮಾಂಗದೊಳು ಕಟ್ಟಳ್ಕರಿಂ ಧರಿಸಿ ೩೦

ನಂದಿ ಗ್ರಾಮದೊಳು ರದದಿಂದಿಳಿದು, ವಾಶಿಷ್ಠ
ಮುನಿವರರ ಮುಖನೋಡಿ, ಅಗ್ರಜನ ರಾಜ್ಯಮಿದು
ಸನ್ಯಸ್ತ ನಿಧಿಯಂತೆ, ರಘುರಾಮ ನಗ್ರಜನ
ಹೇಮಮಯ ಪಾದುಗಳೆ ರಾಜ್ಯರಥವೆಸಗುವುವು
ಬೆಳ್ಗೊಡೆಯ ನೆಳಲಿತ್ತು ಚಿಮ್ಮುತ್ತಿರಿ ಚಾಮರವ
ಪೂರ್ವಜನ ಕಣ್ಣೆದುರ ಪಾದಪದ್ಮಂಗಳಿವು
ಕಾರಣವು ರಾಷ್ಟ್ರದೊಳು ಸದ್ಧರ್ಮ ಪಾಲನೆಗೆ

ಸೌಹಾರ್ದ ಸಾರನಿಧಿ ರಘುರಾಮನಿತ್ತಿಹನು
ನಿಜಹೇಮ ಪಾದಾವನಿಯನೆಮ್ಮಹಿತಬಯಸಿ
ರಾಮನಾಗಮನ ಕಾಂಕ್ಷೆಯೊಳು ಸತ್ಸೇವೆಗಳ ೪೦

ಸಲಿಸುವೆನು ಪರಮಾರ್ಥ ಕೈಂಕರ್ಯ ಭಾವದೊಳು
ಹಳುವದಿಂದಗ್ರಜನು ಬಂದಪನೆ? ಹೇಳಿರೈ
ಬಂದೊಡನೆ ರಘುಗಳನ್ವಯ ತಿಲಕ, "ಬಾ"ಯೆಂದು
ಬರಸೆಳೆದು ಬಿಗಿಯಪ್ಪಿ ತಳಿರಡಿಗೆ ತೊಡಿಸುವೆನೆ
ನವಹೇಮ ಪಾದುಗಳ? ಕಣ್ಣಣೆಯೆ ಕಾಣುವೆನೆ
ಅಣ್ಣನಂಘ್ರಿ ಕಮಲಂಗಳೊಳುರುಳಿ ನಾನಂದು?
ಎನಗೆಲ್ಲಿಯದು ಶಾಂತಿ ರಾಮಂಗೆ ರಾಜ್ಯರಥ
ಭಾರವನು ವಹಿಸುವನ್ನೆವರೆ? ತೊಳೆವೆನಾಗಳೆ
ಈಯೆನ್ನ ಪಾಳ್ವಸಕೆ ಪತ್ತಿರ್ದ ಕಡುಪಾಪ
ಪಂಕಿಲವ, ಪೂರ್ವಜನ ಮಣಿಪಾದ ರಕ್ಷೆಗಳೆ ೫೦

ಶ್ರೀರಕ್ಷೆ ಪುರವರಕೆ ಪಟ್ಟಬಂಧ ನೋತ್ಸವ
ಸಂಭ್ರಮದ ಲಹರಿಯೊಳು ತೇಲುತಿರೆ ಜನಪದವು
ನನಗಂದು ನಾಲ್ಮಡಿಯ ಸಂತಸದ ಸೌಭಾಗ್ಯ
ಸಂಪ್ರಾಪ್ತಿ ಗಡಮೆಂದು ಹಂಬಲಿಸಿದನು ಭರತ
ಈ ಪರಿಯ ವೈರಾಗ್ಯನಿಧಿಯಾ ಭರತ ಚೀರ
ವಸನಗಳನುಟ್ಟು ಜಡೆಗಟ್ಟಿ ಸಚಿವ ಸಂಪುಟ
ಸಹಿತ ಕರಿತುರಗರಥ ರಾಜಿ ಪಾಯ್ದಳಂಗಳ
ಕಾಹಿನಲಿ ವಾರಿಧಿ ವಲಯದವನಿ ಮಂಡಲವ
ತಾಯ್ಪಿಸುಟ ಕಂದನೊಲು, ನಂದಿಗ್ರಾಮಗೊಳಂದು
ರಾಮನಾಣತಿಯಂತೆ ನೋಂಪಿಯನಾಚರಿಸಿ ೬೦

ಪೂರ್ವಜನ ಪಾದುಗಳ ಸಿಂಹಪೀಠದೊಳಿಟ್ಟು
ಬೆಳ್ಗೊಡೆಯನೆತ್ತಿ ಸಿತಸೀಗುರಿಯ ಸೇವೆಗಳ
ತಾನೆ ಸಲಿಸಿದ ನೊಪ್ಪಿಸುತ ನಿತ್ಯಕೈಂಕರ್ಯ
ಭಾವದೊಳರಸೊತ್ತಿಗೆಯ ಸಹಜ ಸಂಗತಿಯ ೬೪

ರಾಘವನ ಪಾದುಕೆಯ ಮುಂದೆಡೆಯ ಕಾಣದೊಳು
ಕಾಣಿಕೆಯ ನರ್ಪಿಸುತ, ತಪ್ಪದಿರೆ ಬಿನ್ನಯಿಸಿ
ಅರಸೊತ್ತಿಗೆಯ ಕಾರ್ಯಗಳ, ಭರತನಾಳಿದನು
ರಘುರಾಮ ನಾಗಮನ ಕಾಂಕ್ಷೆಯೊಳು ಕೋಸಲವ ೬೮

ಶ್ರೀ ಸೀತಾರಾಮಾಯ ಮಂಗಳಂ

# ಮನೋನಿಗ್ರಹ

**- ಪಾರ್ವತಿ ಕೃ.ಸ. ಮೂರ್ತಿ.**

ದಮ ಎಂದರೆ ಮನಸ್ಸನ್ನು ಹಿಡಿತದಲ್ಲಿಟ್ಟುಕೊಳ್ಳುವುದು ಈ ಗುಣ ಮನುಷ್ಯರಿಗೆ ಮಾತ್ರ ಸಾಧ್ಯ ಪ್ರಾಣಿಗಳಿಗೆ ಹೇಳುವ ಮಾತಲ್ಲ ಯಾರು ಮನಸ್ಸಿನ ಮೇಲೆ ಕಡೇಪಕ್ಷ ಸ್ವಲ್ಪವಾದರೂ ಹಿಡಿತವಿಟ್ಟುಕೊಳ್ಳಲು ಶಕ್ತರಲ್ಲವೋ ಅವರ ಜೀವನಕ್ಕೂ ಪ್ರಾಣಿ ಜೀವನಕ್ಕೂ ವ್ಯತ್ಯಾಸವಿರುವುದಿಲ್ಲ ಆದರೆ ಇದು ಸುಲಭ ಸಾಧ್ಯವಾದ ಕೆಲಸವೂ ಅಲ್ಲ

ಹಿರಿಯರು ಮನಸ್ಸನ್ನು ಮಂಗನಿಗೆ ಹೋಲಿಸಿದ್ದಾರೆ ಕಪಿಚೇಷ್ಟೆ ನಿಮಗೆ ಗೊತ್ತು ಹಾಗೆಯೇ ಮನಸ್ಸು ಒಂದು ಕ್ಷಣವೂ ಸುಮ್ಮನಿರಲಾರದು ಎಂಬುದು ಅದರ ಅರ್ಥ ಕೋತಿಯನ್ನು ದೋಣಿನೊಳಗೆ ಕೂಡಿ ಅದರ ಚೇಷ್ಟೆಗೆ ಹೆಚ್ಚು ಅವಕಾಶವಾಗದಂತೆಯಾದರೂ ಮಾಡಬಹುದು ಆದರೆ ಮನಸ್ಸನ್ನು ಯಾವ ದೋಣಿನಲ್ಲೂ ಇಡಲಾಗುವುದಿಲ್ಲ ನೀವು ಕಣ್ಣು ಮುಚ್ಚಿ ಕುಳಿತು ಮನಸ್ಸನ್ನು ಯಾವುದಾದರೂ ಒಂದು ವಿಷಯದ ಮೇಲೆ ಯೋಚಿಸಲು ಪ್ರಯತ್ನಿಸಿ. ಆ ವಿಷಯವನ್ನು ಸೇರಿ, ಅದಕ್ಕೆ ಸಂಬಂಧಪಟ್ಟ, ಪಡದ, ಬೇಕಿದ್ದ ಬೇಡವಾದ ಸಹಸ್ರವಿಷಯಗಳತ್ತ ಕ್ಷಣಾರ್ಧದಲ್ಲಿ ಚಿಂತಿಸಿ ಬಿಡುತ್ತದೆ. ಅಥವಾ ಸಂಚರಿಸಿ ಬರುತ್ತದೆ. ನೀವು ಕುಳಿತ ಜಾಗದಿಂದಲೇ ಎಲ್ಲಿಗೆ ಬೇಕಾದರೂ ಮನಸ್ಸು ಹೋಗಿ ಬಂದುಬಿಡುತ್ತದೆ ಒಂದು ಸಾರಿ ತಾನು ನೋಡದ್ದನ್ನು ನೋಡಬಯಸುತ್ತದೆ ಇನ್ನೊಮ್ಮೆ ಶ್ರೀಮಂತಿಕೆಯನ್ನು ಬಯಸುತ್ತದೆ ಯಾವುದರಲ್ಲೂ ಆಸಕ್ತಿ ಬಿಟ್ಟು ಇದ್ದದ್ದು ಕ್ಷಣಿಕ, ಶಾಶ್ವತವಾದ ಸುಖ ಬೇರೆ ಇದೆ. ಅದನ್ನು ಸಂಪಾದಿಸೋಣ ಎಂದು ಪುಸಲಾಯಿಸಿ ಮನೆಯಿಂದ ಹೊರಡಿಸುತ್ತದೆ ಮನೆಯಿಂದ ನಾಲ್ಕು ಹೆಜ್ಜೆ ಮುಂದಿಟ್ಟ ಕ್ಷಣದಲ್ಲೆ, ಪಾಪ' ಹೆಂಡತಿ ಮಲಗಿದ್ದಾಳೆ ಅವಳಿಗೆ ಹೇಳದೆ ಹೊರಡುವುದು ಹೇಡಿತನ ಎನ್ನುತ್ತದೆ. ಹೆಂಡತಿ ಬಗ್ಗೆ ಬಂದ ಆ ಒಂದು ಪ್ರೀತಿಯ ಭಾವನೆ, ಅಯ್ಯೋ ಪಾಪ' ಅವಳಿಗೆ ನಾನೇನೂ ಸುಖ ಕೊಡಲಿಲ್ಲ, ನನ್ನ ಕೈ ಹಿಡಿದದ್ದಕ್ಕೆ ಅವಳಿಗೆ ಬರೀ ಕಷ್ಟವೇ ಆಯಿತು ಎಂದು ಮನೆಗೆ ಹಿಂದಿರುಗಿಸುತ್ತದೆ ಏನೇ ಆಗಲಿ ಈ ಸ್ಥಿತಿಯಲ್ಲಿ ನಾನು ಮನೆ ಬಿಟ್ಟು ಹೋಗಬಾರದು ಪಾಪ' ಮಕ್ಕಳನ್ನು ಕಟ್ಟಿಕೊಂಡು ಅವಳೊಬ್ಬಳೇ ಏನು ಮಾಡಿಯಾಳು? ಎಲ್ಲರೂ ಬೀದಿ ಪಾಲಾದರೆ' ಎನ್ನಿಸಿ ಕಣ್ಣೀರು ಬರುತ್ತದೆ. 'ನಾನು' ಎಲ್ಲಿದ್ದರೂ ಇವರದೇ ಚಿಂತೆಯಾಗುತ್ತದೆ ಏನನ್ನೂ ಸಾಧಿಸಲಾಗುವುದಿಲ್ಲ ಆದ್ದರಿಂದ ಇಲ್ಲೇ ಇದ್ದು ಕಷ್ಟಪಟ್ಟು ಮೊದಲು ಮಾಡಬೇಕಾದ ಕರ್ತವ್ಯ ಮುಗಿಸೋಣ ನಂತರ ನನ್ನ ಉದ್ಧಾರದ ಪ್ರಶ್ನೆ ಅನಿಸುತ್ತದೆ ಮತ್ತೆ ಸಂಸಾರದ ನೊಗವನ್ನು ಹೆಗಲಿಗಿಟ್ಟು ನಗುತ್ತದೆ ಇಷ್ಟನ್ನೂ ನೀವು ಚಿಂತಿಸಿದಾಗ ನಿಮಗೂ ಈ ಮನಸ್ಸಿನ ಕಪಿಚೇಷ್ಟೆಗೆ ನಗು ಬರದೇ ಇರುತ್ತದೆಯೇ?

ಮನಸ್ಸನ್ನು ನಿಗ್ರಹಿಸಿ ಅದನ್ನೇ ಪರಮ ಶಕ್ತಿಯನ್ನಾಗಿ ಮಾಡಿಕೊಂಡವರು ಇಲ್ಲದೇ ಇಲ್ಲ ಇಂಥವರು ಅತಿ ವಿರಳ ಮನಸ್ಸಿಗೆ ಸೋತು ಅದರ ದಾಸರಾಗಿ ಬದುಕುವವರೇ ಜಗತ್ತಿನಲ್ಲಿ ಹೇರಳ ಆದರೆ ಸ್ವಲ್ಪಮಟ್ಟಿಗಾದರೂ ಮನಸ್ಸನ್ನು ಹಿಡಿತದಲ್ಲಿಟ್ಟುಕೊಂಡು ಅದನ್ನು ತಮ್ಮಗುರಿ ಸಾಧನೆಗೆ ದುಡಿಸಿಕೊಳ್ಳಲಾರದವನು ಈ ಜಗತ್ತಿನಲ್ಲಿ ಏನನ್ನೂ ಸಾಧಿಸಲು ಸಾಧ್ಯವಿಲ್ಲ

ಹಾಗಾದರೆ ಮನಸ್ಸನ್ನು ಪಳಗಿಸುವುದು ಹೇಗೆ?

ಒಂದು ಮಗು ಅಕ್ಷರ ಕಲಿಯಿತು ಎಂದರೆ ಅಷ್ಟರಮಟ್ಟಿಗೆ ಆ ಮಗು ತನ್ನ ಮನಸ್ಸನ್ನು ತನ್ನ ಇಷ್ಟಕ್ಕೆ ಅನುಗುಣವಾಗಿ ದುಡಿಸಿಕೊಂಡಿತು ಎಂದು ಅರ್ಥ ಮನಸ್ಸು ಮಗುವಿಗೆ 'ಅಕ್ಷರ ತಿದ್ದುವುದು ಬೇಡ ನಡಿ ಆಟ ಆಡೋಣ ಎನ್ನುತ್ತದೆ ಆಗ ಮಗು "ಇಲ್ಲ, ನಾನು ಅಕ್ಷರ ಕಲಿಯಲೇಬೇಕು" ಎಂದು ಕೂರುತ್ತದೆ ಆಗ ಯತ್ನವಿಲ್ಲದೆ ಮನಸ್ಸು ತಾನೂ ಮಗುವಿನೊಡನೆ ಕೂತಂತೆ ಮಾಡಿ ಅದು ಎರಡಕ್ಷರ ಬರೆದ ಕೂಡಲೇ ಜೊತೆಯವರೊಡನೆ ಆಟದ ಸ್ಮರಣೆಯಲ್ಲಿ ಕುಣಿಯುತ್ತದೆ ಆಗಲೂ ಮಗು ಆ ಆಸೆಯನ್ನು ನಿರಾಕರಿಸಿದರೆ ಕ್ಷಣಕಾಲವಾದರೂ ಮಗು ಕುಳಿತು ಅಕ್ಷರಾಭ್ಯಾಸ ಮಾಡುತ್ತದೆ ಆಗ ಮನಸ್ಸು "ಆಯ್ತು, ಬೇಗ ಕಲಿತುಬಿಡು ನಂತರ ಆಟಕ್ಕೆ ಹೋಗೋಣ" ಎಂದು ಅಕ್ಷರವನ್ನು ಕಲಿಯಲು ಸಹಾಯಕವಾಗುತ್ತದೆ ಮನಸ್ಸು ಅಲ್ಲಿ ಕೂತ ಕೂಡಲೇ ಮಗುವಿಗೆ ಅಕ್ಷರ ಮನದಟ್ಟಾಗುತ್ತವೆ ಅದು ಕೂರುವವರೆಗೆ ಏನೇ ಪ್ರಯತ್ನ ಮಾಡಿದರೂ ಅಕ್ಷರ ಬರುವುದಿಲ್ಲ ಅಲ್ಲವೇ?

ಇಲ್ಲಿನ ಮುಖ್ಯವಾದ ಅಂಶಗಳನ್ನು ಗಮನಿಸೋಣ- ಮಗು ಅಕ್ಷರವನ್ನು ಕಲಿಯಲೇಬೇಕೆಂದು ಪಟ್ಟು ಹಿಡಿದು ಕೂರುವುದು ಮೊದಲ ಕ್ರಿಯೆ ನಂತರ ಮನಸ್ಸು ಅದನ್ನು ಬದಲಿಸಲು ಹೋರಾಡುತ್ತದೆ ಆಗಲೂ ಪಟ್ಟು ಬಿಡದಿದ್ದರೆ ಮನಸ್ಸು ಆ ಗುರಿ ಸಾಧನೆಗೆ ಸಹಕರಿಸುತ್ತದೆ ಮನಸ್ಸು ಸಹಕರಿಸದಿದ್ದರೆ ಇಡೀ ದಿನ ಕುಳಿತು ಅಕ್ಷರ ಬಂದರೂ ಒಂದೇ ಒಂದು ಅಕ್ಷರವೂ ಮಗುವಿಗೆ ಬರುವುದಿಲ್ಲ ಇಲ್ಲಿ ಮಗು ಅಕ್ಷರ ಕಲಿಯಲೇಬೇಕೆಂಬ ಹಟದ ನಿರ್ಧಾರಕ್ಕೂ ಮನಸ್ಸೇ ಕಾರಣ ಆದರೆ ಅದೇ ಮನಸ್ಸು ಕ್ಷಣಚಿತ್ತ-ಕ್ಷಣಪಿತ್ತವಾಗಿ ತನ್ನ ನಿರ್ಧಾರವನ್ನು ತಾನೇ ಬಿಡಲು ನಿರ್ಧರಿಸುತ್ತದೆ ಆದರೆ, ಅಷ್ಟರಲ್ಲಿ ವಿವೇಕ ಮನಸ್ಸಿನ ನೆರವಿಗೆ ಬರುತ್ತದೆ ಆಗ ಮನಸ್ಸಿನ ಚಾಂಚಲ್ಯಕ್ಕೆ ಮಗು ಮಣಿಯದೆಯೇ ತನ್ನ ಸಹಪಾಠಿಗಳು ಅಕ್ಷರ ಕಲಿತುಬಿಡುತ್ತಾರೆ ತಾನು ಕಲಿಯದೆ ಹೋದರೆ ತನಗೆ ಅವಮಾನವಾಗುತ್ತದೆ. ತನ್ನನ್ನು ದಡ್ಡನೆನ್ನುತ್ತಾರೆ ಎಂದು ಅದೇ ಮನಸ್ಸಿಗೆ ಚಿಂತಿಸುವಂತೆ ಮಾಡುತ್ತದೆ ಆಗ ಮನಸ್ಸು ವಿವೇಕಕ್ಕೆ ಅಧೀನವಾಗುತ್ತದೆ ಆ ಕಾಲದಲ್ಲಿ ಅಕ್ಷರವನ್ನು ಕಲಿಯಲು ಸಹಕರಿಸುತ್ತದೆ ಒಮ್ಮೆ ಮನಸ್ಸು ಸಹಕರಿಸಿ ಕೂತು ಕಲಿಯಿತೆಂದರೆ ಮುಗಿಯಿತು ಜೀವನವಿಡೀ ಅದು ಮರೆಯುವುದಿಲ್ಲ ಇದು ಕ್ಷಣಾರ್ಧದ ಕ್ರಿಯೆ ಆದರೆ ಇಲ್ಲಿ ಒಂದು ಮಾತು ನಿರ್ಧಾರವಾಗುತ್ತದೆ ಅದು, ಮನಸ್ಸು ಸಹಕರಿಸದೇ ಹೋದರೆ ಮಗು ಅಕ್ಷರವನ್ನು ಕಲಿಯಲು ಸಾಧ್ಯವಿಲ್ಲ ಎಂಬುದು ಇದು ಎಲ್ಲರ ಜೀವನದಲ್ಲೂ ಎಲ್ಲ ವಿಚಾರದಲ್ಲೂ ಸತ್ಯ ಮನುಷ್ಯನ ಯಾವುದೇ ಸಾಧನೆ ಆಗಬೇಕಾದರೂ ಮನಸ್ಸು ಸಹಕರಿಸುವಂತಾಗಬೇಕು ಅದನ್ನು ಸಹಕರಿಸುವಂತೆ ಮಾಡಬೇಕಾದರೆ ಮಗು ಅಕ್ಷರವನ್ನು ಕಲಿಯಲೇಬೇಕೆಂದು ಮನಸ್ಸೇ ವಿವೇಕಯುತವಾಗಿ ಚಿಂತಿಸುವಂತೆ ಮಾಡಿ ಅದನ್ನು ಸಹಕರಿಸುವಂತೆ ಒಲಿಸಿಕೊಂಡ ಹಾಗೆ, ಮನಸ್ಸನ್ನು ಯಾರು ವಿವೇಕಯುತವಾಗಿ ಚಿಂತಿಸುವ ಧಾಟಿಯಲ್ಲಿ ಶಿಕ್ಷಣ ಕೊಟ್ಟಿರುತ್ತಾರೋ ಅಂಥವರಿಗೆ ಮನಸ್ಸು ಯಾವುದೇ ಕೆಲಸಮಾಡಲು ಸಹಕರಿಸುತ್ತದೆ ಈ ಸಹಕರಿಸುವ ಅಭ್ಯಾಸ ಬಲವೇ ಅದಕ್ಕೊಂದು ಸಂಸ್ಕಾರವಾಗುತ್ತದೆ ಇಂಥ ಸಂಸ್ಕಾರ ಪ್ರಬಲವಾದಷ್ಟೂ ಮನಸ್ಸಿನ ಚಾಂಚಲ್ಯದ ಅವಧಿಯನ್ನು ಕಡಿಮೆಮಾಡಿಕೊಳ್ಳಬಹುದು ಈ ಅವದಿ ಕಡಿಮೆ ಆದಷ್ಟೂ ಎಂದರೆ ಮನಸ್ಸು ನಮ್ಮ ಸಂಕಲ್ಪ ಬಯಕೆಗಳತ್ತ ಸಹಕಾರ ನೀಡುವ ಸಮಯ ಹೆಚ್ಚಿದಷ್ಟು ನಮ್ಮೆಲ್ಲ ಕಾರ್ಯಗಳನ್ನೂ ಸಾಧಿಸಬಹುದು ಮನಸ್ಸಿನ ಸಹಕಾರ ಇಲ್ಲವಾದರೆ ಯಾವುದೇ ಒಂದು ಸಣ್ಣ ಕೆಲಸವನ್ನು ಸಾಧಿಸಲೂ ಯಾರಿಗೂ ಸಾಧ್ಯವಾಗದು

ಹಾಗಿದ್ದ ಮೇಲೆ ಮನಸ್ಸನ್ನು ನಾವು ನಮ್ಮ ಇಷ್ಟಕ್ಕೆ ಅನುಗುಣವಾಗಿ ದುಡಿಸಿಕೊಳ್ಳುವುದು ಹೇಗೆ?

ಮನಸ್ಸಿನ ಚಾಂಚಲ್ಯವೂ ಮನಸ್ಸಿನದೇ ಸೃಷ್ಟಿ. ನೆನ್ನೆಯ ಅನುಭವ, ಭವಿಷ್ಯಕಲ್ಪನೆ - ಈ ಎರಡರ ನಡುವಿನ ವರ್ತಮಾನದಲ್ಲಿ ಮನಸ್ಸು ಕುಣಿಯುವುದನ್ನೇ ನಾವು ಚಾಂಚಲ್ಯ ಎನ್ನುತ್ತೇವೆ

ಉದಾಹರಣೆಗೆ ಆನಂದ ಎನ್ನುವ ಮನಃಸ್ಥಿತಿಯನ್ನು ಯೋಚಿಸಿ ಆನಂದ ಎಂದರೇನೆಂಬುದನ್ನು ನೆನಪಿಸಿಕೊಳ್ಳಿ, ಯಾವುದೇ ದುಃಖವಿಲ್ಲದ ಒಂದು ಸ್ಥಿತಿ ಅಲ್ಲವೇ? ಈ ಸ್ಥಿತಿ ಹಿಂದೆಯೂ ಇತ್ತು ಇಂದೂ ನಾಳೆಯೂ ಇರುತ್ತದೆ

ಆದರೆ, ಆನಂದ ಎಂಬುದೊಂದು ಮನಃಸ್ಥಿತಿ ಇದೆ ಎಂದ ಮಾತ್ರಕ್ಕೆ ನಮ್ಮ ಅನುಭವಕ್ಕೆ ಬಾರದಿದ್ದಲ್ಲಿ ಅದರ ಅರ್ಥ ಆಗುವುದಿಲ್ಲ ಇಂದಲ್ಲ ನಾಳೆ ಆ ಆನಂದ ಸ್ಥಿತಿಯನ್ನು ಪಡೆದುಕೊಳ್ಳುತ್ತೇನೆಂದು ಸಂಕಲ್ಪ ಮಾಡಿಕೊಂಡರೂ, ಅದರ ಅನುಭವ ನಮಗೆ ಸಿಗುವುದಿಲ್ಲ ಇಂದು ನಾವು ಆ ಆನಂದಸ್ಥಿತಿಯನ್ನು ಅನುಭವಿಸಿದರೆ ಮಾತ್ರ ಎಂದೆಂದೂ ಈ ಸ್ಥಿತಿಯನ್ನು ಕಾಪಾಡಿಕೊಳ್ಳಬೇಕು ಎಂದು ಮನಸ್ಸು ಬಯಸುವುದು ಇದರಿಂದ ಮನಸ್ಸಿಗೆ ಅತ್ಯಂತ ಸುಖಕರವೆನಿಸಿದರೆ ಅದು ತನ್ನ ಕೆಲವು ಪ್ರವೃತ್ತಿಗಳನ್ನು ಬಿಟ್ಟು ಬಿಡಲು ಸಿದ್ಧವಾಗುತ್ತದೆ ಅಂದರೆ ಒಂದನ್ನು ಬಿಟ್ಟು ಇನ್ನೊಂದನ್ನು ಶಿಸ್ತಿಗೆ ಒಳಪಡಿಸುವುದು ಎಂದು ಹೇಳಬಹುದು ಮತ್ತೊಂದನ್ನು ಪಡೆವ ಆಸೆಯೇ ಇದ್ದ ಇನ್ನೊಂದನ್ನು ಬಿಡುವುದಕ್ಕೆ ಕಾರಣ

ಇದನ್ನು ಸ್ವಲ್ಪ ಸ್ಪಷ್ಟಪಡಿಸಿಕೊಳ್ಳೋಣ

ಈ ಹಿನ್ನೆಲೆಯಲ್ಲಿ ನಮ್ಮ ಬದುಕಿನ ಬಗ್ಗೆ ಚಿಂತಿಸೋಣ ಕಾರಣ - ನಮ್ಮನ್ನು ನಾವು ಅರ್ಥಮಾಡಿಕೊಳ್ಳುವುದು - ಅಂದರೆ ತಿಳಿದಿರುವ ವಿಚಾರದಿಂದಲೇ ತಿಳಿಯದೇ ಇರುವುದನ್ನು ಅರ್ಥಮಾಡಿಕೊಳ್ಳುವುದು ಉತ್ತಮ ಪ್ರಯತ್ನವಲ್ಲವೇ? ಅದಕ್ಕಾಗಿ

ನಮ್ಮ ಸುತ್ತ ನೂರಾರು ಅಡ್ಡಿ ಆತಂಕಗಳು, ಭಯ, ಆಸೆ, ಬಯಕೆಗಳು ಸುತ್ತಿಕೊಂಡಿವೆ ಇದು ಏಕೆ ? ಇದು ನಾವೇ ಬಯಸಿ ನಾವೇ ಸುತ್ತಿಕೊಂಡಿರುವುದು ನಮ್ಮಲ್ಲಿ ಅನೇಕರಿಗೆ ಆಸ್ತಿ - ಅಡವು ಶ್ರೀಮಂತಿಕೆ, ಸ್ಥಾನ-ಮಾನ, ತಾವು ಇತರರಿಗಿಂತ ಬುದ್ಧಿವಂತರೆಂದು ಕರೆಸಿಕೊಳ್ಳುವ ಆಸೆ, ಕೀರ್ತಿಕಾಮನೆ ಇರುತ್ತವೆ ಇವುಗಳನ್ನು ಬಿಟ್ಟರೆ ಅವರಿಗೆ ಬದುಕು ಏಕತಾನವಾಗುತ್ತದೆ ಖುಷಿ ಇರುವುದಿಲ್ಲ ಅನಿಸುತ್ತದೆ ಇವುಗಳಿಗೆ ತಮಗರಿವಿಲ್ಲದೆ ತಾವೇ ಬಂದಿಗಳಾಗಿರುತ್ತಾರೆ ನಮ್ಮ ಆಸೆ, ಕನಸು, ಆದರ್ಶ, ಗುರಿ, ಇತ್ಯಾದಿಗಳ ಹೆಸರಿನಲ್ಲಿ ನಾವು ನಮ್ಮ ಮನಸ್ಸಿನ ಸೆರೆಯಾಳಾಗಿದ್ದೇವೆ - ಅಲ್ಲವೇ?

ನಿಜ - ಇದರಿಂದ ನಾವು ಬಿಡುಗಡೆ ಆಗುವುದು ಹೇಗೆ? ಇದು ಇಲ್ಲಿ ಮುಖ್ಯ ಪ್ರಶ್ನೆ, ಬಿಡುಗಡೆ ಆಗಬೇಕು ಎಂಬ ಸಂಕಲ್ಪವೂ, ಒಂದು ರೀತಿ ಬಂಧನವೇ ಆಗುತ್ತದೆ ಹಾಗಾದರೆ, ಈ ಎಲ್ಲ ನಮ್ಮ ಮನಃಸ್ಥಿತಿಯು ಹಿಂದಿರುವ ನಂಬಿಕೆ, ಅದರ ಸ್ವರೂಪ, ಅದರ ಸಕಲ ಪ್ರತಿಕ್ರಿಯೆಗಳನ್ನು ಅರಿಯುವುದರಿಂದ ಮಾತ್ರ ನಾವು ಬಿಡುಗಡೆ ಪಡೆಯಬಹುದು ನಮ್ಮ ಮನಸ್ಸು ಶಿಸ್ತಿನಿಂದ ವಿಚಾರಮಾಡಿ, ಇದು ಸರಿ ಇದು ತಪ್ಪು ಎಂದು ತನಗೆ ತಾನೇ ನಿರ್ಧಾರಮಾಡಿಕೊಂಡಾಗ ಯಾವುದೇ ಪೂರ್ವನಿಶ್ಚಿತ ಸ್ಥಿತಿಯಿಂದ ನಾವು ಬಿಡುಗಡೆ ಆಗಲು ಸಾಧ್ಯ ಆಗುತ್ತದೆ ಆದರೆ, ಇದನ್ನು ಬಿಟ್ಟು ಇನ್ನೊಂದನ್ನು ಅನುಸರಿಸಬೇಕಾದರೆ ಅದು ಯಾವುದು ? ಎಂಬ ಪ್ರಶ್ನೆ ಬರುತ್ತದೆ ಅಷ್ಟೇ ಅಲ್ಲ ಪ್ರತಿಯೊಬ್ಬ ಮನುಷ್ಯನೂ ತನಗಿರುವ ಬುದ್ಧಿ ಮತ್ತು ವಿಚಾರಶಕ್ತಿಗೆ ಅನುಗುಣವಾಗಿ ಬಿಡುವುದು ಯಾವುದೋ ಅದಕ್ಕಿಂತ ಮುಂದೆ ಹಿಡಿಯಲು ಬಯಸುವುದು ಉತ್ತಮವಾಗಿರಬೇಕೆಂದು ಬಯಸುತ್ತಾರೆ ಇದು ಸ್ವಾಭಾವಿಕ ಇಂಥ ಅರಿವಿನೆಚ್ಚರ ಮನುಷ್ಯನಲ್ಲಿ ಆದಾಗ ಅಂಥ ಮನುಷ್ಯನನ್ನು ತಿದ್ದಲು ಯಾವುದೇ ಕಾನೂನು, ಕಾಯಿದೆ, ಮಸೂದೆಗಳೂ ಬೇಕಾಗುವುದಿಲ್ಲ ಅಂಥವನಿಗೆ ಅವನ ಮನಸ್ಸೇ ಗುರುವಾಗಿರುತ್ತದೆ ಅದಕ್ಕೆ ಶಿಸ್ತುಬದ್ಧವಾಗಿ ಎಲ್ಲವನ್ನೂ ವಿಚಾರಮಾಡಿ ತೀರ್ಮಾನ ತೆಗೆದುಕೊಳ್ಳುವ, ಇದು ಸರಿ ಇದು ತಪ್ಪು ಎಂದು ನಿರ್ಣಯಿಸುವ ಶಕ್ತಿಯನ್ನು ಪಡೆದುಕೊಂಡಿರುತ್ತದೆ ಈ ಜಗತ್ತಿನ ರೂಪ ನಮ್ಮ ಅಂತರಂಗದ ಪ್ರತಿರೂಪ ಹೊರಗಿನ ಎಲ್ಲ ವಿಚಾರಗಳ ಉಪಯುಕ್ತತೆ, ಅನಿತ್ಯತೆ, ವೈವಿಧ್ಯಪೂರ್ಣ ಸ್ಥಿತ್ಯಂತರಗಳನ್ನು ಅರ್ಥಮಾಡಿಕೊಳ್ಳುವ ನಮ್ಮ ಮನಸ್ಸನ್ನು ನಾವು ಅರ್ಥಮಾಡಿಕೊಳ್ಳಬೇಕು ಈ ಮನಸ್ಸನ್ನು ಅರ್ಥಮಾಡಿಕೊಳ್ಳಬೇಕಾದರೆ ಮತ್ತೆ ನಾವು ಹೊರಜಗತ್ತಿನ ವಾಸ್ತವತೆಯನ್ನು ಅರ್ಥಮಾಡಿಕೊಳ್ಳುವುದರ ಮೂಲಕವೇ ಪ್ರಯತ್ನಿಸಬೇಕು ಹೊರ ಜಗತ್ತಿನ ಎಲ್ಲ ಪದಾರ್ಥ, ಸ್ಥಿತಿ, ಗತಿಗಳೊಂದಿಗೆ ನಮ್ಮ ಮನಸ್ಸು ಅದನ್ನು ಅದರ ಉಪಯುಕ್ತತೆಯನ್ನು ಅರ್ಥಮಾಡಿಕೊಳ್ಳುತ್ತ ಹೋದಂತೆ ನಾವು ಯಾವುದನ್ನು ಬಿಡಬೇಕು, ಯಾವುದನ್ನು ಹಿಡಿದುಕೊಳ್ಳಬೇಕೆಂಬ ಬಗ್ಗೆ ಶಕ್ತರಾಗುತ್ತೇವೆ ಮನಸ್ಸು ಸ್ವತಂತ್ರವಾಗುತ್ತದೆ ಅರಿವಿನೆಚ್ಚರ ಮೂಡುತ್ತದೆ ನಮ್ಮ ಮನಸ್ಸಿನ ಚಾಂಚಲ್ಯ ಹಾಗೂ ಅದಕ್ಕಿರುವ ಅದ್ಭುತ ಶಕ್ತಿಗಳನ್ನೂ ಸಹ ಅರಿಯಲು ಪ್ರಯತ್ನಿಸುವುದರಿಂದ ಈ ಅರಿವಿನೆಚ್ಚರ ಮಾತ್ರ ಬರುತ್ತದೆ

ಈಗ ನನ್ನದು ಚಂಚಲ ಮನಸ್ಸು. ಏನು ಕಂಡರೂ ಅದು ನನಗೆ ಬೇಕು ಎನ್ನುವ ಆಸೆ ಬುರುಕ ನಾನು ಎಂದಿಟ್ಟುಕೊಳ್ಳಿ, ಈ ಆಸೆಬುರುಕ ತನದಿಂದ ನನಗೆ ಅವಮಾನವಾಗಿದೆ, ನೋವುಂಟಾಗಿದೆ, ನಿರಾಸೆಯಾಗಿದೆ ಎಂದುಕೊಳ್ಳಿ, ಆಗ ನಾನು "ಈ ಹಾಳು ಆಸೆಯಿಂದ ಹೀಗಾಯಿತು ಇನ್ನು ಮೇಲೆ ಹೀಗೆ ಕಂಡ ಕಂಡದ್ದಕ್ಕೆಲ್ಲಾ ಆಸೆ ಪಡಬಾರದು" ಎಂದು ನನ್ನ ಮನಸ್ಸು ಪ್ರಶಾಂತವಾಗಿದ್ದಾಗ ಚಿಂತಿಸುತ್ತೇನೆ ಹೀಗೆ ಚಿಂತಿಸಲು ಕಾರಣವೇನು? ಅದರಿಂದ ನನಗೆ ಅತೃಪ್ತಿ, ಅಶಾಂತಿ, ಅಸಮಾಧಾನ ಉಂಟಾದದ್ದರಿಂದ ಅಲ್ಲವೇ? ಈ ಅತೃಪ್ತಿ, ಅದರಿಂದ ಉಂಟಾದ ನೋವು, ಅಪಮಾನ, ಗೊಂದಲ ಇವುಗಳನ್ನು ಉಂಟುಮಾಡಿದ್ದು ನನ್ನ ಆಸೆ ಆದ್ದರಿಂದ ಅದನ್ನು ನಾನು ಬಿಡಬೇಕು ಇದಕ್ಕಿಂತ ಉತ್ತಮವಾದ ಆದರ್ಶವಾದ ಗುಣವನ್ನು ನಾನು ನನ್ನದನ್ನಾಗಿ ಮಾಡಿಕೊಳ್ಳಬೇಕು ಎಂದು ಆಸೆಪಡುತ್ತೇನೆ. ಇದು ಕೂಡ ಮತ್ತೊಂದು ಬಯಕೆ ಅಥವಾ ಆಸೆ ಆದರೂ ಮೊದಲಿನ ಆಸೆಗೂ ಇದಕ್ಕೂ ವ್ಯತ್ಯಾಸವಿದೆ ಇಲ್ಲಿ ನೋವು, ಗೊಂದಲ, ಅಪಮಾನಗಳಿಂದ ಬದಲಾವಣೆ ತರುವ ಸ್ಥಿತಿಯನ್ನು ನಾನು ಕಂಡದ್ದನ್ನೆಲ್ಲಾ ಬೇಕೆನ್ನುವ ಆಸೆ ಬಿಡುವುದರಿಂದ ಪಡೆಯಬಹುದೆಂದು ಅರಿತುಕೊಳ್ಳುತ್ತೇನೆ ಆದರೆ ಕಂಡದ್ದನ್ನೆಲ್ಲಾ ಬಯಸಿದ ಮನಸ್ಸು ಅಷ್ಟು ಬೇಗ ಈ ಆಸೆಬುರುಕತನವನ್ನು ಬಿಟ್ಟುಕೊಡಲು ಸಿದ್ಧವಿರುವುದಿಲ್ಲ ಆಗ ಮನಸ್ಸು ಕಂಡದ್ದನ್ನೆಲ್ಲಾ ಬಯಸಿದಾಗ ಹಿಂದೆ ಆದ ಅಪಮಾನ, ನೋವುಗಳನ್ನು ಜ್ಞಾಪಿಸಿಕೊಂಡು, ಅದು ಬೇಡವೆಂದು ಮನಸ್ಸಿಗೆ ವಿವೇಕ ಕಂಡುಕೊ

ಳ್ಳುವುದಕ್ಕೆ ಮಾಡುವ ಪ್ರಯತ್ನವೇ ಮನಸ್ಸನ್ನು ಶಿಸ್ತಿಗೆ ಒಳಪಡಿಸುವುದು ಎಂಬುದು ಅರ್ಥವಾಗುತ್ತದೆ

ಮನಸ್ಸಿಗೆ ನಾವು ಈ ರೀತಿ ಕೊಡುವ ಶಿಕ್ಷಣವೇ ಅದಕ್ಕೆ ಸಂಸ್ಕಾರವಾಗುತ್ತದೆ ಸಂಸ್ಕಾರಗೊಂಡ ಮನಸ್ಸು ಹೆಚ್ಚು ಚಾಂಚಲ್ಯವನ್ನು ಕಳೆದುಕೊಳ್ಳುತ್ತದೆ ಕಾರಣ, ಅದರ ಮುಂದೆ ಇನ್ನೊಂದು ಆದರ್ಶವಿರುತ್ತದೆ ಮನಸ್ಸಿನ ಸ್ವಭಾವ ಯಾವಾಗಲೂ ಒಂದರಿಂದ ಮತ್ತೊಂದಕ್ಕೆ ಹಾರುವುದು ಆ ಗುಣವನ್ನೇ ಹಿಡಿದು ಅದರ ಮಾರ್ಗದಲ್ಲೇ ಅದಕ್ಕೆ ಮತ್ತೊಂದು ಉನ್ನತ ಆದರ್ಶ ಸಾಧನೆಯತ್ತ ಚಿಂತಿಸುವ ಹಾಗೆ ಮಾಡುವುದೇ ವಿವೇಕ ಈ ವಿವೇಕ ಯುಕ್ತವಾಗಿ ಮನಸ್ಸನ್ನು ಪಳಗಿಸಿಕೊಳ್ಳಲು ಮಾಡುವ ಹೋರಾಟವೇ ಸಂಸ್ಕಾರ

ಮನಸ್ಸು ವಿವೇಕದ ಅಧೀನವಾಗಿರುವ ಕಾಲ ಸ್ವಲ್ಪ ಸ್ವಲ್ಪವಾಗಿ ಹೆಚ್ಚಾಗುತ್ತಾ ಬಂದಂತೆಲ್ಲಾ ಮನಸ್ಸನ್ನು ನಮ್ಮ ಗುರಿಯ ಸಾದನೆಗೆ ದುಡಿಸಿಕೊಳ್ಳಲು ಪ್ರಯತ್ನಿಸಬಹುದು ಮನಸ್ಸು ಪ್ರಚಂಡಶಕ್ತಿ ಪ್ರತಿ ಸೃಷ್ಟಿಯನ್ನೇ ಮಾಡಬಲ್ಲ ಶಕ್ತಿ ಅದಕ್ಕಿದೆ

ಹೇಗೆ ?

ಈಗ ನಾವು ಬಿಸಿಲಿನಲ್ಲಿ ನಿಂತುಕೊಳ್ಳೋಣ ಕೈಯನ್ನು ಬಿಸಿಲಿಗೆ ಚಾಚೋಣ ಕೈ ಬಿಸಿಯಾಗುತ್ತದೆ ಆದರೆ ಸುಡುವುದಿಲ್ಲ ಆದರೆ ಒಂದು ಭೂತಕನ್ನಡಿ ತೆಗೆದುಕೊಳ್ಳಿ, ಸೂರ್ಯನಿಗೆ ಅಭಿಮುಖವಾಗಿ ಹಿಡಿಯಿರಿ ಬೀಳುವ ಬೆಳಕಿನ ಕಿರಣವನ್ನು ಸಣ್ಣಗೆ ಕೇಂದ್ರೀಕೃತಮಾಡಿ ಆ ಕಿರಣ ಬಿದ್ದ ಭಾಗ ಸುಡುತ್ತದಲ್ಲವೇ? ಹಾಗೆಯೇ ಮನಸ್ಸಿನ ಸ್ಥಿತಿ ಮನಸ್ಸನ್ನು ಏಕೀಭವಿಸಿ, ಅದನ್ನು ಶಿಸ್ತಿಗೊಳಪಡಿಸಿ, ಅದರೆಲ್ಲ ಸಾಮರ್ಥ್ಯವನ್ನೂ ಒಂದು ವಿಷಯದ ಬಗ್ಗೆ ಚಿಂತಿಸಲು ಬಿಟ್ಟಾಗ ಅದು ಅದರೆಲ್ಲ ರಹಸ್ಯವನ್ನೂ ಬಯಲು ಮಾಡುತ್ತದೆ ಆಗ ನಮಗೆ ಸತ್ಯದರ್ಶನ ವಾಗುತ್ತದೆ

ಮನಸ್ಸಿಗೆ ಇಂದ ಶಿಕ್ಷಣವನ್ನು ಕೊಡಲು ಧರ್ಮ ಎನ್ನುವ ಚೌಕಟ್ಟು ಅಗತ್ಯವೆಂದು ನಮ್ಮ ಹಿರಿಯರು ಕಂಡುಕೊಂಡರು ಧರ್ಮಾಧೀನವಾದ ಮನಸ್ಸು ಶಿಸ್ತಿನಿಂದ ಇರಬಲ್ಲದು ಅದು ಸತ್ಯದರ್ಶನ ಮಾಡಿಸಬಲ್ಲದು ಎಂದು ಮಾರ್ಗದರ್ಶನ ಮಾಡಿದರು

ಮನಸ್ಸನ್ನು ಸ್ವಭಾವ ಜನ್ಯ ಚಾಂಚಲ್ಯದಿಂದ ಪಾರುಮಾಡಿ ಅದಕ್ಕೆ ಶಿಸ್ತನ್ನು ಕಲಿಸಿ ನಿತ್ಯಾನಂದವನ್ನು ಬಯಸುವಂಥ ಶಿಕ್ಷಣ ಕೊಡಬೇಕಾದರೆ ಅದರ ನಿಗ್ರಹ ಅಗತ್ಯವೆಂದರು, ಅದೇ ದಮ

* * *

# ಹಚ್ಚಿದ ಹಣತೆ

ಎಂ. ಸಿ. ನರಸಿಂಹನ್.

ದಕ್ಷಿಣ ಭಾರತದ ತಿರುವೈಯ್ಯಾರ್ ಪವಿತ್ರ ಕ್ಷೇತ್ರ, ಕರ್ನಾಟಕ ಸಂಗೀತ ಕಲಾತಪಸ್ವಿಗಳಿಗೂ, ಕಾಲಾಭಿಮಾನಿಗಳಿಗೂ, ಶಿಕ್ಷಣಾಸಕ್ತರಿಗೂ, ಶ್ರೀರಾಮಭಕ್ತರಿಗೂ ಸದಾ ಯಾತ್ರಾಸ್ಥಳ 'ತಿರು-ಐ-ಆರು' - ಶ್ರೇಷ್ಠವಾದ ನದಿಗಳು ಹರಿಯುವ ಈ ಕ್ಷೇತ್ರದಲ್ಲಿ ಸಂಗೀತಕಾವೇರಿಯೂ ಸದಾ ಶ್ರೀರಾಮನಿಗೆ ನಾದೋಪಾಸನೆಯಾಗಿ ಹರಿಯುತ್ತಿದ್ದಾಳೆ ಭಕ್ತಿ ಸುಗಂಧದ ಮಲಯಮಾರುತ, ಜಲಚರ ಪಕ್ಷಿಗಳ ಕಲಕಲ ಹಂಸಧ್ವನಿ, ದೇವಿ ಧರ್ಮ ಸಂವರ್ಧಿನಿ ಹಾಗೂ ಶ್ರೀ ಪಂಚನದೀಶ್ವರರ ಪವಿತ್ರ ಸಾನ್ನಿಧ್ಯ ಘಂಟಾನಿನಾದದ ಓಂಕಾರ ಜತೆಗೆ ಸಂಗೀತ ತ್ರಿಮೂರ್ತಿಗಳಲ್ಲಿ ಒಬ್ಬರಾದ ವಾಲ್ಮೀಕಿ ಮಹರ್ಷಿಯ ಅವತಾರರಾದ ಶ್ರೀ ತ್ಯಾಗರಾಜ ಸ್ವಾಮಿಗಳ ಪವಿತ್ರ ಸಮಾಧಿ, ಪಕ್ಕದಲ್ಲೇ ಮಹರ್ಷಿ ವಾಲ್ಮೀಕಿಯ ಸನ್ನಿಧಿ, ಅದರ ಗೋಡೆಗಳ ಸುತ್ತ ಅಮೃತ ಶಿಲೆಯಲ್ಲಿ ಶ್ರೀ ತ್ಯಾಗರಾಜಸ್ವಾಮಿಗಳ ಅಮರಕೃತಿಗಳಲ್ಲಿ ಕೆಲವನ್ನು ಕೆತ್ತಲಾಗಿದೆ ತಿರುವೈಯ್ಯಾರ್‌ನಲ್ಲಿ ಪ್ರತಿವರ್ಷ ಪುಷ್ಯ ಬಹುಳ ಪಂಚಮಿಯಂದು ಬಹು ಭಕ್ತಿಯುತವಾಗಿ ಅಮೋಘವಾಗಿ ಜರುಗುವ 'ಶ್ರೀ ತ್ಯಾಗರಾಜ ಆರಾಧನಾ' ಮಹೋತ್ಸವದಲ್ಲಿ ವಿಶ್ವದ ಅನೇಕ ಕಲಾತಪಸ್ವಿಗಳು, ಕಲಾಭಿಮಾನಿಗಳು, ಉದಯೋನ್ಮುಖ ಕಲಾವಿದರು, ಶ್ರೀರಾಮಭಕ್ತರು ಸಹಸ್ರಾರು ಸಂಖ್ಯೆಯಲ್ಲಿ ಸೇರುತ್ತಾರೆ ದೈಹಿಕ ಮಾನಸಿಕ ಅಧ್ಯಾತ್ಮಿಕ ಉದ್ಧಾರಕ್ಕಾಗಿ ಶ್ರೀ ಪಂಚರತ್ನ ಕೀರ್ತನೆ ಗೋಷ್ಠಿಗಾನ ಹಾಗೂ ತ್ಯಾಗರಾಜಸ್ವಾಮಿಗಳ ಇತರ ಕೃತಿಗಳ ನಾದೋಪಾಸನೆ, ನಾದಾಂಜಲಿ ಜರುಗುತ್ತದೆ. ಈ ಆರಾಧನೆಯಲ್ಲಿ ಭಾಗವಹಿಸುವುದೇ ಅತ್ಯಂತ ಅದೃಷ್ಟ, ಮಂಗಳಕರ ಶ್ರೀ ತ್ಯಾಗಬ್ರಹ್ಮರ ಸಮಾಧಿಯ ಸನಿಹದಲ್ಲೇ ಒಬ್ಬ ತ್ಯಾಗಜ್ಯೋತಿ ಮಹಿಳೆಯ ಸಮಾದಿ ಇದೆ ಅದೇ ಕರ್ನಾಟಕ ಸಂಗೀತಕ್ಕೂ ಸಂಗೀತವಿಶ್ವಕ್ಕೂ ಶ್ರೀ ತ್ಯಾಗಬ್ರಹ್ಮರಿಗೂ ಸೇವೆ ಸಲ್ಲಿಸಿ ಸ್ಮರಣೀಯಳಾದ ಬೆಂಗಳೂರು ನಾಗರತ್ನಮ್ಮ ಅವರ ಸಮಾಧಿ. ಶ್ರೀ ತ್ಯಾಗಬ್ರಹ್ಮರ ಸಮಾಧಿಯ ನಿರ್ಮಾಣಕ್ಕೆ ತನ್ನೆಲ್ಲಾ ತನು-ಮನ-ಧನ ಅಳಿಲು ಸೇವೆಯಾಗಿ ನೀಡಿ ವಾರ್ಷಿಕ ಆರಾಧನೆಗೆ ನಾಂದಿ ಹಾಡಿದ ಬೆಂಗಳೂರಿನ ನಾಗರತ್ನಮ್ಮನವರು ಹಚ್ಚಿದ ಈ ತ್ಯಾಗಜ್ಯೋತಿಯ ಹಣತೆ ನಾಡೆಲ್ಲ ಮತ್ತಿತರ ಸೇವಾಸಂಸ್ಮೃತಿ ಹಣತೆಗಳಿಗೆ ಮಾರ್ಗದರ್ಶಕ ಪ್ರಕಾಶ ಬೀರಲೆಂದೇ ಹಾರೈಕೆ ಕರ್ನಾಟಕ ಸಂಗೀತ, ಶ್ರೀರಾಮಸೇವೆ, ಆಂಧ್ರ - ತಮಿಳು - ಕರ್ನಾಟಕ ಮುಂತಾದ ಭಾಷಾಭಾವೈಕ್ಯತೆಗೆ ಕಾರಣಳಾದ ಆಕೆಯ ಜೀವನ ಸದಾ ಸ್ಮರಣೀಯ ತ್ಯಾಗರತ್ನ ನಾಗರತ್ನಮ್ಮ 1878 ರಲ್ಲಿ ಜನಿಸಿದರು ಬಾಲ್ಯದಲ್ಲೇ ತಾಯಿಯ ಪ್ರೀತಿ, ಪ್ರಗತಿಗೆ ಸಹಾಯ, ನಾಗರತ್ನಮ್ಮನನ್ನು ದಿಟ್ಟಚಲ



ಗಾತಿ ಆಗಿಸಿತು ಗುರು ತಮ್ಮಯ್ಯ ಮೈಸೂರು ಮಹಾರಾಜರ ಆಸ್ಥಾನ ವಿದ್ವಾನ್ ಆದರೆ ಶಿಕ್ಷಣ ಅಪೂರ್ಣ ಆದ್ದರಿಂದ ಆ ಗುರುವಿನಂತೆಯೇ ತನ್ನ ಮಗಳೂ ರಾಜ ದರ್ಬಾರಿನಲ್ಲಿ ಕಛೇರಿ ನಡೆಸಿ ದೇವೀಕೃಪೆ ಪಡೆಯಬೇಕೆಂಬ ಪ್ರಬಲ ಧ್ಯೇಯ ತಾಯಿ ಪುಟ್ಟಲಕ್ಷ್ಮಿಯಲ್ಲಿ ಪ್ರಜ್ವಲಿಸಿತು ಬೆಂಗಳೂರಿಗೆ ಬಂದು ಶ್ರೀ ತ್ಯಾಗರಾಜರ ನೇರ ಶಿಷ್ಯ ವಾಲಾಜಪೇಟೆ ವೇಂಕಟರಮಣ ಭಾಗವತರ್‌ರ ಶಿಷ್ಯ ಮುನಿಸ್ವಾಮಪ್ಪನವರನ್ನು ಪ್ರಾರ್ಥಿಸಿಕೊಂಡರು ಅವರೂ ಬಾಲಕಿ ನಾಗರತ್ನಳ ಕಂಠಶ್ರೀ, ಆತ್ಮವಿಶ್ವಾಸ, ಪ್ರತಿಭಾಪ್ರಭೆ ಗುರುತಿಸಿ ತಾವೇ ಮುಂದಾಗಿ ಸಂಗೀತ ಶಿಕ್ಷಣ ನೀಡಿದರು ತಾಯಿ ಪುಟ್ಟಲಕ್ಷ್ಮಿ ತನ್ನ ಒಡವೆಗಳನ್ನೇ ಒತ್ತೆ ಇಟ್ಟು ಮಗಳಿಗೆ ಸಂಗೀತ ಶಿಕ್ಷಣವಲ್ಲದೆ ಭರತನಾಟ್ಯ ಆಂಗ್ಲ-ತಮಿಳು-ತೆಲುಗು-ಕನ್ನಡ-ಸಂಸ್ಕೃತ ಭಾಷಾ ಶಿಕ್ಷಣಗಳನ್ನೂ ವ್ಯವಸ್ಥೆ ಮಾಡಿದಳು ನಾಗರತ್ನಮ್ಮನ ಈ ಬಹುಮುಖ ಪ್ರತಿಭೆಯನ್ನು ಶ್ಲಾಘಿಸಿ ಅಂದಿನ ಹಿರಿಯ ವಿದ್ವಾಂಸ ಕಲ್ಯಾಣಪೂರ್ಣ ಸೂರ್ಯನಾರಾಯಣತೀರ್ಥರು 'ವಿದ್ಯಾಸುಂದರಿ' ಬಿರುದನ್ನು ನೀಡಿ ಗೌರವಿಸಿದರು

ಶ್ರೀಮತಿ ನಾಗರತ್ನಮ್ಮ ಅವರಿಗೆ ಆಸ್ಥಾನವಿದ್ವಾನ್ ಗುರು ತಮ್ಮಯ್ಯನವರ ಗಾಯನ ಶೈಲಿಯನ್ನೇ ಕಲಿಯಲು ಆಸೆ ಮುನಿಸ್ವಾಮಪ್ಪನವರ ಕಾರ್ಯಸಂಯೋಜನೆಯಿಂದ ತಮ್ಮಯ್ಯನವರ ನೇರ ಶಿಷ್ಯ ವಿಖ್ಯಾತ ಬಿಡಾರಂ ಕೃಷ್ಣಪ್ಪನವರಿಂದ ೧೫ ವರ್ಷದ ಬಾಲಕಿ ನಾಗರತ್ನಮ್ಮ ಶಿಕ್ಷಣಗಳಿಸಿ ಅಪೂರ್ವ ಪ್ರೌಢಿಮೆ, ಭಕ್ತಿ ಒಲುಮೆ ಕೋರಿದರು ಈ ಮಧ್ಯೆ ಬಾಲಕಿಯ ತಾಯಿ ಪುಟ್ಟಲಕ್ಷ್ಮಿಯವರಿಗೆ ಕ್ಷಯವಾಗಿ ಶ್ರೀರಾಮಪಾದ ಸೇರಿದರು ಅವರ ಆಸೆಯನ್ನು ಮುನಿಸ್ವಾಮಪ್ಪ ನೆರವೇರಿಸಲು ಸತತ ಶ್ರಮಿಸಿದರು ಮೈಸೂರಿನ ವೀಣಾಪರಂಪರೆ ಸೊಬಗು, ಬೆಡಗನ್ನು ವಿಶ್ವವಿಖ್ಯಾತ ಮಾಡಿದ ವೀಣೆ ಶೇಷಣ್ಣನವರ ಗೃಹದಲ್ಲೇ ಕಲಾತಪಸ್ವಿಗಳ ಸಮ್ಮುಖದಲ್ಲೇ ನಾಗರತ್ನಮ್ಮನ ಪ್ರಥಮ ಸಂಗೀತ ಕಛೇರಿ ('ಅರಂಗೇಟ್ರಂ') ನಡೆಯಿತು ಈ ದೈವದತ್ತ ಕಂಠಶ್ರೀ, ಅಭ್ಯಾಸ ಫಲಗಳನ್ನು ಕಂಡು ವಿದ್ವತ್ ಸಭೆ ಆನಂದದಿಂದ ಆಶೀರ್ವದಿಸಿತು ಸ್ವಯಂ ವೀಣೆ ಶೇಷಣ್ಣನವರು ಜೋಡಿ ಶಾಲು ಮರ್ಯಾದೆ ಮಾಡಿ ಹಿರಿಯ ವಿದ್ವಾಂಸರಿಗೆ ಸಲ್ಲುವಂತೆಯೇ ಸನ್ಮಾನಿಸಿ ಹರಸಿದರು ಅದು ಅವಿಸ್ಮರಣೀಯ ಮೈಲಿಗಲ್ಲು ಸಹಜವಾಗಿ ಆಳಿದ ಮಹಾಸ್ಥಾ



ಮಿಯವರಾದ ಮಹಾರಾಜ ಜಯಚಾಮರಾಜ ಒಡೆಯರ್ ದರ್ಬಾರ್‌ನಲ್ಲೇ ನಾಗರತ್ನಮ್ಮನವರ ಅಪೂರ್ವ ಕಛೇರಿ ಏರ್ಪಡಿಸಿದರು ಅಲ್ಲಿಯೇ ಉಪಸ್ಥಿತರಿದ್ದ ಆಸ್ಥಾನ ವಿದ್ವಾನ್ ಗಿರಿಭಟ್ಟ ತಮ್ಮಯ್ಯ ಶಾಸ್ತ್ರಿಯವರೂ ಕಛೇರಿ ಮೆಚ್ಚಿಕೊಂಡರು ಹೀಗೆ ತಾಯಿ ಪುಟ್ಟಲಕ್ಷ್ಮಿ ಅವರ ಕನಸು ನನಸಾಯಿತು ಮುನಿಸ್ವಾಮಪ್ಪ ಧನ್ಯರಾದರು.

ಅರಮನೆ ಕಛೇರಿಯಿಂದ 'ಬೆಂಗಳೂರು ನಾಗ ರತ್ನಮ್ಮ' ನವರ ಖ್ಯಾತಿ ಹರಡಿತು ಮದ್ರಾಸಿನ ಸಿ.ಎಸ್. ರಾಜರತ್ನಮೊದಲಿಯಾರರ ಆಹ್ವಾನ ಪ್ರಗತಿ ಸೋಪಾನ. ಧ್ವನಿವರ್ಧಕವೇ ಇಲ್ಲದ ಆ ಕಾಲದಲ್ಲಿ ಇವರ ಕಂಠಶ್ರೀ, ಆಳವಾದ ಸಾಹಿತ್ಯಜ್ಞಾನ, ಭಕ್ತಿ ಪ್ರಧಾನ ಗಾಯನಗಳು 1905 ರಿಂದ 1934 ರ ಪೂರ್ತಿ 1235 ಕ್ಕೂ ಹೆಚ್ಚಿನ ಸಂಖ್ಯೆಯಲ್ಲಿ ನಾಡೆಲ್ಲ ನಡೆದುದು ಗಮನೀಯ ಸಾಧನೆ. ಆ ಕಾಲದಲ್ಲೇ ಮೂರು ಭಾಗವಾಗಿ ಮಡಿಚಿಕೊಂಡೊಯ್ಯಬಲ್ಲ ಕೈ ತಂಬುರ ಶ್ರುತಿ ವಿಶಿಷ್ಟ, ಮೈಸೂರು ವಾಸುದೇವಾಚಾರ್ಯರಿಂದ ಕಾಂಚಿಯ ಶ್ರೀ ಚಂದ್ರಮೌಳೀಶ್ವರಸ್ವಾಮಿರ ಸಾನ್ನಿಧ್ಯದಲ್ಲಿ ಕಾಂಚೀ ಪರಮಗುರುಗಳಿಂದ ಹೀಗೆ ಆಶೀರ್ವಾದಮಾಲೆ ಕವಿರಾಜಸಾರ್ವಭೌಮ ಕಾಶಿ ಶ್ರೀ ಯು.ಪಿ ಕೃಷ್ಣಮಾಚಾರ್ಯರಿಂದ 'ಗಾನಕಲಾವಿಶಾರದಾ', ಮುಂದೆ 'ತ್ಯಾಗ ಸೇವಾಸದನ್' ಇತ್ಯಾದಿ ಬಿರುದುಗಳೂ ದೊರಕಿದವು. ಕಾರ್ತಿಕೇಯನ ಅಂಶ ಶ್ರೀ ಮುತ್ತುಸ್ವಾಮಿ ದೀಕ್ಷಿತರ ಕೃತಿಗಳು ಬೀಜಾಕ್ಷರಪೂರಿತ ಅವರ ಬಗ್ಗೆ ಶ್ರೀಮತಿ ನಾಗರತ್ನಮ್ಮನವರ ಗೌರವಾದರ ಅಪೂರ್ವ

ಅವರ ಮುಂದಿನ ಜೀವನವೆಲ್ಲಾ ತ್ಯಾಗವೈರಾಗ್ಯಮಯ ತಮಗೆ ದೊರೆತ ಸಂಪನ್ಮೂಲಗಳನ್ನು ಸದ್ಗುರು ತ್ಯಾಗಬ್ರಹ್ಮರಿಗೇ ಅರ್ಪಿಸಿ 'ಕೆರೆಯ ನೀರನು ಕೆರೆಗೆ ಚೆಲ್ಲಿ ವರವ ಪಡೆದಂತೆ ಕಾಣುವ' ಧನ್ಯತೆ ಪಡೆಯುವ ತೀವ್ರ ಹಂಬಲ ಗುರು ಬಿಡಾರಂ ಕೃಷ್ಣಪ್ಪನವರ ಸಂದೇಶಾದೇಶ, ತಿರುವೈಯಾರ್‌ನ ತ್ಯಾಗರಾಜ ಸಮಾಧಿ ಜೀರ್ಣೋದ್ಧಾರಕ್ಕೆ ತಮ್ಮಲ್ಲಿದ್ದ ಸಕಲ ಧನ, ಒಡವೆ ಎಲ್ಲ ನೀಡಿ ಆ ಸ್ಥಳವನ್ನು ಅತಿ ಪುಣ್ಯ ಯಾತ್ರಾಸ್ಥಳವನ್ನಾಗಿ ಮಾಡಿದರು ಕ್ರಿ.ಶ 1921 ರಿಂದ 1925 ರ ಪೂರ್ತಿ ಈ ಸೇವೆ ಮುಗಿಸಿ ಕುಂಭಾಭಿಷೇಕದ ವೇಳೆ ತಾವೇ ಶ್ರೀ ತ್ಯಾಗರಾಜ ಶತನಾಮಾವಳಿ ರಚಿಸಿ ಪೂಜೆ ಅರ್ಚನೆ ನಡೆಸಿ ಕೃತಾರ್ಥರಾದರು ಆ ದೇವಾಲಯ ನಿರ್ಮಿಸಲು ಎಲ್ಲಿಯವರೆಗೆ ಉತ್ಖನನ ಮಾಡಬೇಕೆಂದು ಚರ್ಚಿಸಿ ಕಡೆಗೆ ತಂತ್ರಜ್ಞರು ಕೆಲಸ ಮಾಡಿಸುತ್ತಿದ್ದಾಗ ಒಂದೆಡೆ ಶ್ರೀಗಂಧದ ಪರಿಮಳ ಘಟ್ಟನೆ ಎಲ್ಲೆಲ್ಲಿಯೂ ವ್ಯಾಪಿಸಿತಂತೆ! ಆ ಕ್ಷಣ ಉತ್ಖನನ ನಿಲ್ಲಿಸಿ ಸಮಾಧಿ ನಿರ್ಮಿಸಲಾಯಿತಂತೆ ಮತ್ತೊಮ್ಮೆ ದಕ್ಷಿಣದ ವಿದ್ವಾಂಸರು ಸಾಯಂಸಂಧ್ಯೆಗೆ ಆ ಕಾವೇರಿ ತೀರಕ್ಕೆ ಹೋದಾಗ ಸಮಾಧಿ ಇರುವ ದಿಕ್ಕಿನಿಂದ ಶ್ರೀರಾಮನಾಮ ಜಪ ಕೇಳಿಸಿದ ದಾಖಲೆ ಇದೆ ಇಂಥ ಪವಿತ್ರ ಯಾತ್ರಾಸ್ಥಳದಲ್ಲಿ ತ್ಯಾಗರತ್ನ ನಾಗರತ್ನಮ್ಮ ಧ್ಯಾನಸ್ಥರಾಗಿ ಕುಳಿತು ಪೂಚ್ಚಿ ಶ್ರೀನಿವಾಸ ಐಯ್ಯಂಗಾರ್ ವಿರಚಿತ ರೀತಿ ಗೌಳರಾಗ ಕೃತಿ 'ಸದ್ಗುರು ಸ್ವಾಮಿಕಿ ಸಾಟಿಯು ಲೇದು' ಎಂದು ನಾದಾಂಜಲಿ ಅರ್ಪಿಸುತ್ತಿದ್ದರು ಮಹಿಳಾಮಣಿಗಳ ಸಂಘ ಶ್ರೀಮತಿ ಶಕುಂತಲಾ ಸೇತುರಾಮನ್ ನೇತೃತ್ವದಲ್ಲಿ ಮೂಡಿ ಶ್ರೀರಾಮಭಜನೆ, ಶ್ರೀತ್ಯಾಗರಾಜಭಜನೆ ನಡೆಸುತ್ತಿದ್ದರು ಆ ಕಾಲದಲ್ಲಿ ಪುರುಷ ವಿದ್ವಾಂಸರು ಮಾತ್ರ ಆರಾಧನೆಗಳಲ್ಲಿ ಶ್ರೀ ಪಂಚರತ್ನ ಕೀರ್ತನೆ ಗೋಷ್ಠಿ ಗಾನ ಸೇವೆ ಸಲ್ಲಿಸುತ್ತಿದ್ದರು ಕರ್ನಾಟಕದ ಖ್ಯಾತ ವಿದ್ವಾನ್ ಗಾನಕಲಾವಿಶಾರದ ಎಂ ಎ ನರಸಿಂಹಾಚಾರ್ ಮುಂತಾದವರು ಶ್ರೀಮತಿ ನಾಗರತ್ನಮ್ಮನವರನ್ನು ನೋಡಿದ್ದಾರೆ ಶ್ರೀಮತಿ ಶಕುಂತಳಾ ಸೇತುರಾಮನ್‌ರ ತಂಗಿ ಶ್ರೀಮತಿ ಜಾನಕಿ ಸುಬ್ರಮಣಿಯಂಗೆ ಏಳು ವರ್ಷದ ಬಾಲಕಿ ಆಗಿದ್ದಾಗ ತ್ಯಾಗರತ್ನ ನಾಗರತ್ನಮ್ಮನವರ ಮುಂದೆ ಕೆಲ ಕೀರ್ತನೆ ಹಾಡಿ 'ಅರಂಗೇಟ್ರಂ', ತ್ಯಾಗಬ್ರಹ್ಮ ಸಮಾಧಿಯ ಮುಂದೆ ಆಯಿತು ವಿದುಷಿ ಜಾನಕಿ ಸುಬ್ರಮಣಿಯಂರ ಸೇವಾಫಲವೇ ವಾಲ್ಮೀಕಿ ಸನ್ನಿಧಿಯಲ್ಲಿ ಅಮೃತಶಿಲಾ ಫಲಕ ಕೃತಿಕೆತ್ತನೆಗಳು ಇವರೂ ಸಹ ಮುಂದೆ ವಿ|| ಎಂ ಎ ನರಸಿಂಹಾಚಾರ್ ಅವರಿಂದ ಕೃತಿ ಮಾರ್ಗದರ್ಶನ ಪಡೆದು ಅವರನ್ನು ಸನ್ಮಾನಿಸಿದರು ಇವರು ಈ 'ತ್ಯಾಗಜ್ಯೋತಿ'ಯ ಪರಮಭಕ್ತೆ

ಬೆಂಗಳೂರು ನಾಗರತ್ನಮ್ಮ ಮುಂದೆ 27 ವರ್ಷಗಳ ಕಾಲ ಇದ್ದು, ವೃದ್ಧಾಶ್ರಮ, ವಿಧವಾಶ್ರಮ, ದೀನದಲಿತರ ಸೇವೆ, ತಿರುನಾರಾಯಣಪುರದಲ್ಲಿ ಧರ್ಮಛತ್ರ, ವೈರಮುಡಿ ಬ್ರಹ್ಮೋತ್ಸವಕ್ಕೆ ಕಾಣಿಕೆ, ತಿರುಪತ್ತೂರಿನ ಶ್ರೀ ತ್ಯಾಗರಾಜರ ದೈವ ದೇವಿ ತ್ರಿಪುರಸುಂದರಿ ಸೇವೆ, ಸ್ವಾತಂತ್ರ್ಯ ಸಮರದಲ್ಲಿ ದುರಂತಕ್ಕೀಡಾದವರಿಗೆ ಸಹಾಯ - ಇತ್ಯಾದಿ ಹಲವು ಸಮಾಜಸೇವೆ, ಗುರು ಆರಾಧನೆ, ಬೆಂಗಳೂರು ಶ್ರೀರಾಮಮಂದಿರ ಬ್ರಹ್ಮೋತ್ಸವಗಳ ವ್ಯವಸ್ಥೆ ಮಾಡಿ ಸು|| 78 ನೇ ವಯಸ್ಸಿನಲ್ಲಿ ಮೇ 1952, ವೈಶಾಖ ಬಹುಳ ಏಕಾದಶಿಯಂದು ತ್ಯಾಗಬ್ರಹ್ಮನ ಪಾದಗಳಲ್ಲಿ ಸೇರಿದರು ಅವರ ಸಮಾಧಿ ಶ್ರೀ ತ್ಯಾಗಬ್ರಹ್ಮರ ಸಮಾಧಿಯ ಸನಿಹದಲ್ಲೇ ಇದ್ದು ಎಲ್ಲರಿಗೂ ಆ ತ್ಯಾಗಜ್ಯೋತಿಯ ಪ್ರಕಾಶ ನೀಡುತ್ತಿದೆ ನಾಡಿಗೆ ನಾದೋಪಾಸನ, ತ್ಯಾಗಜೀವನಗಳಿಂದ ಭಾವೈಕ್ಯತೆ ತಂದ ಬೆಂಗಳೂರು ನಾಗರತ್ನಮ್ಮ ಎಲ್ಲರಿಗೂ ಮಾರ್ಗದರ್ಶಿ

ಎಂದರೋ ಮಹಾನುಭಾವುಲು
ಅಂದರಿಕಿ ವಂದನಮು




Statement about ownership and other particulars about

**SAPTHAGIRI**

**(MONTHLY)**

**FORM IV**

*See Rule 8*

| | | |
|---|---|---|
| 1 | Place of Publication | TIRUPATI |
| 2 | Periodicity of its Publication | Monthly |
| 3 | Honorary Editor | Dr I V Subba Rao, I A S<br>Executive Officer, T T D |
| 4 | Printer's Name | M Lakshmana Rao, B.A L P T |
| | Whether citizen of India | Yes |
| | Address | Manager, T T D Press, Tirupati |
| 5 | Editor & Publisher's Name | Dr N S Ramamurthy, |
| | Whether citizen of India | Yes |
| | Address | Editor, Sapthagiri, T T D Journal, Tirupati |
| 6 | Name and address of individuals who own the Newspaper and partners or shareholders holding more than one percent of the Total Capital | Board of Trustees represented by the Executive Officer on behalf of T T D , Tirupati |

*I, N S. Ramamurthy, hereby declare that the particulars given above are true to the best of my knowledge and belief*

TIRUPATI
Date 28-2-1999

(Sd ) N S RAMAMURTHY
*Signature of the Publisher*

# ಧರ್ಮದ ಸ್ವರೂಪ

- ವಿದ್ವಾನ್ 'ರಘುಸುತ'

ಧರ್ಮಂ ಚರ (ಧರ್ಮ ಮಾಡು, ಧರ್ಮೇಣ ಸುಖಮಾಸೀತ (ಧರ್ಮದಿಂದ ಸುಖ ದೊರೆಯುವುದು) ಧರ್ಮಾನ್ನ ಪ್ರಮದಿತವ್ಯಮ್ (ಧರ್ಮಾಚರಣೆಯಲ್ಲಿ ನಿಧಾನ, ಅಸಡ್ಡೆಗಳನ್ನು ತೋರಬಾರದು) - ಎಂದು ವೇದವು ತಿಳಿಸುತ್ತದೆ

ಹಾಗಿದ್ದರೆ ಈ ಧರ್ಮ ಅಂದರೆ ಏನು ? ಇದರಿಂದ ಎಂತಹ ಸುಖ ದೊರೆಯುತ್ತದೆ ? - ಎಂಬುದನ್ನು ಪರೀಕ್ಷಿಸಬೇಕಾದುದು ಅವಶ್ಯ ಇದಕ್ಕೆ ಮೊದಲು ಧರ್ಮ ಎನ್ನುವ ಶಬ್ದದ ಅರ್ಧವನ್ನು ಅರಿಯುವುದು ಅಗತ್ಯ

## ಧರ್ಮದ ಅರ್ಥ

ವ್ಯಾಕರಣದ ದೃಷ್ಟಿಯಿಂದ ಧರ್ಮ ಶಬ್ದವು ಧೃಞ್ ಧಾರಣೇ ಧಾತುವಿನ ಮುಂದೆ ಮನ್ ಎಂಬ ಪ್ರತ್ಯಯ ವನ್ನು ಸೇರಿಸುವುದರಿಂದ ಉಂಟಾಗುತ್ತದೆ ಇದರ ವ್ಯುತ್ಪತ್ತಿ ಮೂರು ರೀತಿಗಳಲ್ಲಿ ಆಗು

ಧ್ರಿಯತೆ ಲೋಕಃ ಅನೇನ ಇತಿ ಧರ್ಮಃ

- ಯಾವುದರಿಂದ ಪ್ರಪಂಚವು ಧಾರಣೆಯನ್ನು ಹೊಂದಿದೆಯೊ ಅದುವೆ ಧರ್ಮ

ಧರತಿ ಧಾರಯತಿ ವಾ
ಲೋಕಮ್ ಇತಿ ಧರ್ಮಃ

- ಯಾವುದು ಲೋಕವನ್ನು ಧಾರಣೆಗೊಂಡಿದೆಯೊ ಅದು ಧರ್ಮವಾಗಿದೆ

ಧ್ರಿಯತೆ ಯಃ ಸ ಧರ್ಮಃ.

- ಯಾವುದು ಬೇರೆಯವರನ್ನು ಹೊರುವುದೊ, ಪೋಷಿಸಲು ಯೋಗ್ಯವಾದುದೊ ಅದೇ ಧರ್ಮ

ಮಹಾಭಾರತದಲ್ಲಿ ಧರ್ಮದ ಲಕ್ಷಣವನ್ನು ಕರ್ಣಪರ್ವ (೬೯/೫೮) ದಲ್ಲಿ-

ಧಾರಣಾದ್ಧರ್ಮ ಮಿತ್ಯಾಹುಃ
ಧರ್ಮೋ ಧಾರಯತೆ ಪ್ರಜಾಃ
ಯತ್ಸ್ಯಾದ್ಧಾರಣ ಸಂಯುಕ್ತಂ
ಸ ಧರ್ಮ ಇತಿ ನಿಶ್ಚಯಃ

- ಎಂದು ತಿಳಿಸಿದ,

ಅಂದರೆ - 'ಧಾರಣೆ (ಪೋಷಿಸುವುದು) ಮಾಡುವುದನ್ನು ಜನರು ಧರ್ಮ ಎಂದು ಕರೆಯುತ್ತಾರೆ ಧರ್ಮವು ಪ್ರಜೆಗಳನ್ನು ಧಾರಣೆ ಮಾಡುತ್ತದೆ ಧಾರಣೆ (ಪೋಷಿಸುವಿಕೆ)ಯೊಂದಿಗೆ ಇರುವಿಕೆಯೇ ಧರ್ಮ ಎಂದು ಹೇಳಲಾಗುತ್ತದೆ - ಇದು ನಿಶ್ಚಯ

ಇದರಿಂದ ಧರ್ಮ ಶಬ್ದವು ಬಹಳ ವ್ಯಾಪಕವಾದ ಅರ್ಥವನ್ನು ಉಳ್ಳದ್ದು ಎಂದು ಹೇಳಬಹುದು

ಅಮರಕೋಶದಲ್ಲಿ ಈ ಶಬ್ದದ ಏಳು ಅರ್ಥಗಳನ್ನು ನೀಡಲಾಗಿದೆ ೧) ಸುಕೃತ (ಪುಣ್ಯ), ೨) ವೈದಿಕ ವಿಧಿವಿಧಾನಗಳು, ಯಾಗ ಮುಂತಾದುವುಗಳು, ೩) ಯಮರಾಜ, ೪) ನ್ಯಾಯ, ೫) ಸ್ವಭಾವ, ೬) ಆಚಾರ, ೭) ಸೋಮರಸವನ್ನು ಕುಡಿಯುವವನು

ಬೇರೆ (ಶಬ್ದ) ಕೋಶಗಳಲ್ಲಿ ಧರ್ಮದ ಅರ್ಥ ಈ ರೀತಿ ಇದೆ-

೧) ಶಾಸ್ತ್ರೋಕ್ತ ಕರ್ಮದ ಅನುಷ್ಠಾನದಿಂದ ಉತ್ಪನ್ನವಾಗುವ ಭವಿಷ್ಯ ಫಲದ ಸಾಧನ ಸ್ವರೂಪವಾದ ಶುಭಾದೃಷ್ಟ ಅಥವಾ ಪುಣ್ಯಾಪುಣ್ಯರೂಪ ಭಾಗ್ಯವೆ ಧರ್ಮ

೨) ಶ್ರೌತ ಮತ್ತು ಸ್ಮಾರ್ತ ಧರ್ಮ

೩) ವಿಹಿತ ಕ್ರಿಯೆಯಿಂದ ಸಿದ್ಧಿಹೊಂದುವ ಗುಣ ಅಥವಾ ಕರ್ಮಜನ್ಯ ಅದೃಷ್ಟ.

೪) ಆತ್ಮಾ

೫) ದೇಹವನ್ನು ಧಾರಣೆ ಮಾಡುವುದರಿಂದ ಉಂಟಾಗುವ ಜೀವಾತ್ಮಾಶುದ್ಧಿ, ಆಚಾರ ಅಥವಾ ಸದಾಚಾರಗಳ ಅನುಭೂತಿಯೇ ಧರ್ಮ

೬) ವಸ್ತುದ ಗುಣ

೭) ಸ್ವಭಾವ

೮) ಉಪಮ

೯) ಯಾಗ ಇತ್ಯಾದಿಗಳು

೧೦) ಅಹಿಂಸೆ

೧೧) ನ್ಯಾಯ

೧೨) ಉಪನಿಷತ್

೧೩) ಧರ್ಮ (ಯಮ) ರಾಜ

೧೪) ಸೋಮಾಧ್ಯಾಯಿ

೧೫) ಸತ್ಸಂಗ

೧೬) ಧನುಸ್ಸು

೧೭) ಜ್ಯೋತಿಷ ಮತಾನುಸಾರ ನವಮ ಸ್ಥಾನ ಅಥವಾ ಭಾಗ್ಯಭವನ

೧೮) ದಾನ ಇತ್ಯಾದಿ

ನಿರುಕ್ತದಲ್ಲಿ ಧರ್ಮ ಶಬ್ದದ ಅರ್ಥ ನಿಯಮ ಎಂದು ಹೇಳಲಾಗಿದೆ ಧಾತುಗತ ಅರ್ಥ ಧಾರಣೆ ಮಾಡುವುದು ಎಂದಾಗುತ್ತದೆ ಇವೆರಡೂ ಸೇರಿದರೆ ಧರ್ಮ ಶಬ್ದದ ಅರ್ಥ ಯಾವ ನಿಯಮದಿಂದ ಈ ಪ್ರಪಂಚವು ಧಾರಣೆ ಮಾಡುವುದೊ (ಪಾಲಿಸಲ್ಪಡುವುದೊ) ಅದೇ ಧರ್ಮವಾಗಿರುತ್ತದೆ

ಅಂದರೆ 'ಜಗತ್ತಿನ ಸ್ಥಿತಿ ಮತ್ತು ಅದರ ಅಭ್ಯುದಯ ಮತ್ತು ನ್ಯಾಯ ಸಮ್ಮತ ವ್ಯವಹಾರಗಳು ಯಾವುದನ್ನು ಅವಲಂಬಿಸಿರುವುವೋ ಅಂತಹ ಒಂದು ಗುಣವೇ ಧರ್ಮ', 'ಜಗತ್ತಿನ ಅಭ್ಯುದಯ ಮತ್ತು ನಿಃಶ್ರೇಯಸ್ಸುಗಳಿಗೆ ಕಾರಣಭೂತವಾದ ಗುಣವೇ ಧರ್ಮ' (ಸಂ + ಕ ಶಬ್ದಕೋಶ) ಎಂಬರ್ಥವು ಸ್ಪಷ್ಟವಾಗುತ್ತದೆ

'ಜಗತ್ತಿನ ಶ್ರೇಯಸ್ಸಿಗೆ ಕಾರಣವಾದ ಈ ಧರ್ಮವು ಪ್ರತಿ ಸಾಮಾನ್ಯ ಮಾನವನಲ್ಲೂ ಇರಬೇಕು? ಇಂತಹ ಧರ್ಮವು ಹತ್ತು ವಿಧ-

ಧೃತಿಃ ಕ್ಷಮಾ ದಮೋऽಸ್ತೇಯಂ
ಶೌಚ ಮಿಂದ್ರಿಯ ನಿಗ್ರಹಃ
ಧೀರ್ವಿದ್ಯಾ ಸತ್ಯಮಕ್ರೋಧೋ
ದಶಕಂ ಧರ್ಮ ಲಕ್ಷಣಮ್

ಧರ್ಮದ ಮತ್ತೊಂದು ಮುಖ್ಯವಾದ ಅರ್ಥವೆಂದರೆ ಸದಾಚಾರ ಸಂಪನ್ನರಾದ ಹಿರಿಯರು ಸರಿ ಎಂದು ಒಪ್ಪುವ, ಪ್ರಶಂಸಿಸುವ ಮಾನವನ ಆಚಾರವೇ ಧರ್ಮ ಎಂಬುದು ಬಹಳ ಮುಖ್ಯವಾದ ಭಾವವನ್ನು ಹೊರಗೆಡಹುತ್ತದೆ

ಧರ್ಮದಿಂದ ಸುಖವು ದೊರೆಯುವುದೆ ? ವೇದಗಳು ಹೇಳುತ್ತವೆ.- ಧರ್ಮಾಚರಣೆಯಿಂದ ಸುಖವು ದೊರೆಯುತ್ತದೆ. ಧನಾದ್ಧರ್ಮಃ ತತಃ ಸುಖಮ್- ಎಂಬ ಮಾತೂ ಇದೆ ಧನದಿಂದ ಧರ್ಮವೂ ಅಂತಹ ಧರ್ಮದಿಂದ ಸುಖವೂ ದೊರೆಯುತ್ತದೆ.

ಈ ಸುಖವು ಲೋಕದ ಮತ್ತು ಪರಲೋಕದ ಸುಖ ಎಂಬ ಎರಡು ಬಗೆಯದ್ದಾಗಿರುತ್ತವೆ ಈ ಎರಡೂ ರೀತಿಗಳಿಂದ ದೊರೆಯುವ ಸುಖವೇ ಧರ್ಮ ಎಂದೂ ಕರೆಯಲಾಗುತ್ತದೆ.

## ಧರ್ಮದ ಲಕ್ಷಣಗಳು

ಎಲ್ಲ ಮಾನವರೂ, ಸುಖದಿಂದ ಜೀವಿಸಲು ಪ್ರಯತ್ನಿಸುತ್ತಾರೆ ಇದರ ಸಾಧನೆಯೇ ಧರ್ಮ ಇದಕ್ಕೆ ಅನೇಕ ಲಕ್ಷಣಗಳಿವೆ ಮುಖ್ಯವಾದುವೆಂದರೆ -

೧ನೇ ಲಕ್ಷಣ ಇದರ ಪ್ರಕಾರ ವೈಶೇಷಿಕ ದರ್ಶನದ ಪಕ್ತಾರನಾದ ಮಹರ್ಷಿ ಕಣಾದನು ಧರ್ಮದ ಲಕ್ಷಣವನ್ನು ಹೀಗೆಂದು ವಿವರಿಸುತ್ತಾನೆ-

ಯತೋಽಭ್ಯುದಯ ನಿಃಶ್ರೇಯ-
ಸಸಿದ್ಧಿಃ ಸ ಧರ್ಮಃ

ಅಂದರೆ ಯಾವುದರಿಂದ ಮಾನವನು ಈ ಲೋಕದಲ್ಲಿ ಉನ್ನತಿ, ಪರಲೋಕದಲ್ಲಿ ಮೋಕ್ಷಪ್ರಾಪ್ತಿಯನ್ನು ಹೊಂದುವನೊ ಅದೇ ಧರ್ಮ ಇದು ಧರ್ಮದ ಮೊದಲ ಲಕ್ಷಣವಾಗಿದೆ.

ಈ ಧರ್ಮದ ಮೂಲ ವೇದ ಮನುವು ಇದರ ಬಗ್ಗೆ 'ವೇದೋಽಖಿಲೋ ಧರ್ಮ ಮೂಲಮ್' ಎಂದು ತಿಳಿಸಿ, ಸಮಸ್ತ ವೇದ (ಋಕ್, ಯಜುಃ, ಸಾಮ, ಅಥರ್ವ) ಗಳೂ ಧರ್ಮದ ಮೂಲವೇ ಆಗಿದೆ ಎಂದು ಸ್ಪಷ್ಟಪಡಿಸಿದ್ದಾನೆ

ವೇದವು ಹೇಳುವುದು (ವೇದ ಪ್ರಣಿಹಿತೋ ಧರ್ಮೋಹ್ಯಧರ್ಮ ಸ್ತದ್ವಿಪರ್ಯಯಃ ೬-೧-೪೪), ವೇದದಲ್ಲಿ ತಿಳಿಸಿರುವುದಷ್ಟೂ ಧರ್ಮವಾಗಿರುತ್ತದೆ, ಇದಕ್ಕೆ ವಿರುದ್ಧವಾದುದೇ ಅಧರ್ಮ

೨ ನೇ ಲಕ್ಷಣ 'ಚೋದನಾಲಕ್ಷಣೋಽರ್ಥೋ ಧರ್ಮಃ' (ವೇದದಲ್ಲಿ ಪ್ರೇರಣೆಯನ್ನು ಉಂಟುಮಾಡುವುದು ಯಾವುದೋ ಆ ಪದಾರ್ಥವೇ ಧರ್ಮ) ಎಂಬುದರ ಅನುಸಾರ ವೇದಗಳಲ್ಲಿ ಬರೆದಿರುವಂತೆ ಕರ್ಮ ಮಾಡುವುದು ಧರ್ಮವಾಗಿದೆ ಅವುಗಳಲ್ಲಿ ನಿಷೇಧಿಸಿರುವ ಕರ್ಮಗಳನ್ನು ಮಾಡದಿರುವುದೇ ಧರ್ಮ ವೇದಗಳಲ್ಲಿ ವಿವರಿಸಿರುವ ವರ್ಣಾಶ್ರಮ ದರ್ಮಗಳನ್ನು ಅನುಸರಿಸದೆ ಇರುವುದು ಮತ್ತು ಅನುಸರಿಸಬೇಡವೆಂದು ಹೇಳಿರುವ ಕಾರ್ಯಗಳನ್ನು ಮಾಡುವುದು ಅಧರ್ಮವಾಗುತ್ತದೆ

೩ನೇ ಲಕ್ಷಣ (ವೇದ ವಿಹಿತತ್ವಮ್) ವೇದಗಳಲ್ಲಿ ತಿಳಿಸಿರುವುದೇ ದರ್ಮ ಎಂಬುದು ಧರ್ಮದ ಮೂರನೇ ಲಕ್ಷಣ

೪ನೇ ಲಕ್ಷಣ ಕ್ರಿಯಾಸಾಧ್ಯತ್ವೇ ಸತಿ ಶ್ರೇಯಸ್ಕರತ್ವಮಿತಿ ಲೌಕಿಕಾಃ - ಎಂಬುದು ಧರ್ಮದ ನಾಲ್ಕನೇ ಲಕ್ಷಣ

ಕ್ರಿಯೆ (ಕರ್ಮ)ಗಳ ಮುಖಾಂತರ ಮಾನವರಿಗೆ ಉಪಕಾರವಾಗುವಂತೆ ವರ್ತಿಸುವುದು ಧರ್ಮದ ಲಕ್ಷಣವಾಗಿದೆ ಇದು ಜಗತ್ತಿನ ಸತ್ಪುರುಷರ ಅಭಿಪ್ರಾಯವಾಗಿದೆ

೫ನೇ ಲಕ್ಷಣ 'ಸತ್ಯಾಜ್ಞಾಯತೇ, ದಯಯಾಜನೇನ ಚ ವರ್ಧತೇ, ಕ್ಷಮಾಯಾಂ ತಿಷ್ಠತಿ, ಕ್ರೋಧಾನಶ್ಯತಿ' ಎಂಬುದು ಧರ್ಮದ ಐದನೆಯ ಲಕ್ಷಣವಾಗಿದೆ

ಸತ್ಯದ ಪಥವನ್ನು ಅನುಸರಿಸುವುದೇ ಧರ್ಮ ಸತ್ಯದಿಂದಲೇ ಧರ್ಮದ ಸೃಷ್ಟಿಯಾಗುತ್ತದೆ ದಯೆ ಮತ್ತು ದಾನ ಗುಣಗಳಿಂದ ಇದು ವೃದ್ಧಿಯಾಗುತ್ತದೆ ಕ್ಷಮೆಯಿಂದ ಸಂಬಂಧಪಟ್ಟ ವ್ಯಕ್ತಿಯಲ್ಲಿ ಅದು ನೆಲಸುತ್ತದೆ ಕ್ರೋಧದಿಂದ ಅಂತಹ ವ್ಯಕ್ತಿ ನಾಶವಾಗುತ್ತಾನೆ, ಅವನಲ್ಲಿನ ಧರ್ಮವೂ ನಾಶವಾಗುತ್ತದೆ

೬ನೇ ಲಕ್ಷಣ ಮನುಸ್ಮೃತಿಯಲ್ಲಿ ಧರ್ಮದ ಆರನೇ ಲಕ್ಷಣವನ್ನು ವಿವರಿಸಲಾಗಿದೆ

ವೇದಃ ಸ್ಮೃತಿಃ ಸದಾಚಾರಃ
ಸ್ವಸ್ಯ ಚ ಪ್ರಿಯಮಾತ್ಮನಃ
ಏತಚ್ಚತುರ್ವಿಧಂ ಪ್ರಾಹುಃ
ಸಾಕ್ಷಾದ್ಧರ್ಮಸ್ಯ ಲಕ್ಷಣಮ್

(೨-೧೨)

ವೇದ, ಸ್ಮೃತಿ (ಧರ್ಮಶಾಸ್ತ್ರ) ಇವುಗಳ ಪಠಣ, ಸದಾಚಾರ (ಸತ್ಪುರುಷರ ಆಚರಣೆ), ತನ್ನ ಆತ್ಮವನ್ನು ಪ್ರಸನ್ನಗೊಳಿಸುವುದು - ಇವುನಾಲ್ಕೂ ಧರ್ಮವನ್ನು ಅನುಸರಿಸುವವರ ಸಲ್ಲಕ್ಷಣಗಳಾಗಿವೆ

ಶ್ರುತಿ ಸ್ಮೃತಿಭ್ಯಾ ಮುದಿತಂ ಯತ್
ಸ ಧರ್ಮಃ ಪ್ರಕೀರ್ತಿತಃ

ಶ್ರುತಿ (ವೇದ) ಮತ್ತು ಸ್ಮೃತಿ (ಧರ್ಮಶಾಸ್ತ್ರ)ಗಳಲ್ಲಿ ಏನು ಹೇಳಿವೆಯೊ ಅದನ್ನೆ ಧರ್ಮವೆಂದು ಕರೆಯಲಾಗುತ್ತದೆ

ಶ್ರುತಿ ಸ್ಮೃತ್ಯುದಿತಂ ಧರ್ಮ
ಮನುತಿಷ್ಠನ್ ಹಿ ಮಾನವಃ
ಇಹ ಕೀರ್ತಿ ಮವಾಪ್ನೋತಿ
ಪ್ರೇತ್ಯಂ ಚಾನುತ್ತಮಂ ಸುಖಮ್

(೨-೯)

ಶ್ರುತಿ ಮತ್ತು ಸ್ಮೃತಿಗಳಲ್ಲಿ ತಿಳಿಸಿರುವ ಧರ್ಮ (ಸೂತ್ರಗಳನ್ನು) ವನ್ನು ಅನುಸರಿಸುವ ವ್ಯಕ್ತಿಯು ಈ ಲೋಕದಲ್ಲಿ ಯಶಸ್ಸನ್ನು ಪಡೆಯುವುದೇ ಅಲ್ಲದೆ ಪರಲೋಕದಲ್ಲಿ ಮೋಕ್ಷವನ್ನೂ ಪಡೆಯುವನು

ಆಚಾರಃ ಪ್ರಥಮೋ ಧರ್ಮಃ
ಶ್ರುತ್ಯುಕ್ತಃ ಸ್ಮಾರ್ತ ಏವ ಚ
ತಸ್ಮಾದಸ್ಮಿನ್ ಸದಾ ಯುಕ್ತೋ
ನಿತ್ಯಂ ಸ್ಯಾದಾತ್ಮವಾನ್ ದ್ವಿಜಃ

(೧-೧೦೮)

ಶ್ರುತಿ ಮತ್ತು ಸ್ಮೃತಿಗಳಲ್ಲಿ ವಿವರಿಸಿರುವ ಸದಾಚಾರವು ಅತ್ಯುತ್ತಮ ಧರ್ಮವಾದುದು ಇದರಿಂದ ಆತ್ಮಜ್ಞಾನಿಯಾಗಿರುವ ದ್ವಿಜನು ಯಾವಾಗಲೂ ಸದಾಚಾರದಿಂದ ಕೂಡಿರುವನು

ಏಕ ಏವ ಸುಹೃದ್ ಧರ್ಮೋ
ನಿಧನೇಽಪ್ಯನುಯಾತಿ ಯಃ
ಶರೀರೇಣ ಸಮಂ ನಾಶಂ
ಸರ್ವಮನ್ಯತ್ತು ಗಚ್ಛತಿ

ಧರ್ಮವೊಂದೇ ಸಾವಿನಲ್ಲಿ ವ್ಯಕ್ತಿಯ ಜೀವದೊಂದಿಗೆ ಹೋಗುವುದು ಉಳಿದವೆಲ್ಲವೂ ಶರೀರದ ನಾಶದೊಂದಿಗೆ ನಾಶವಾಗುತ್ತವೆ

೭ನೇ ಲಕ್ಷಣ 'ಧರ್ಮೋ ರಕ್ಷತಿ ರಕ್ಷಿತಃ' ಎಂಬಂತೆ ವ್ಯವಹಾರ ನಿಬಂಧನೆಗಳಿಗೆ ಅನುಗುಣವಾಗಿ ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಸಾದಾಚಾರ, ಆಚರಣೆಗಳಿಂದ ಧರ್ಮಮಾರ್ಗವನ್ನು ಅನುಸರಿಸುತ್ತಾ ಬಂದರೆ, ಆ ಧರ್ಮವೇ ಅವನನ್ನು ರಕ್ಷಿಸುತ್ತದೆ - ಎಂಬುದು ಈ ಧರ್ಮದ ಏಳನೇ ಲಕ್ಷಣವಾಗಿದೆ

## ಧರ್ಮದ ವಿಭಾಗಗಳು

ವೇದಗಳಲ್ಲಿ ಧರ್ಮದ ಮೂರು ವಿಭಾಗ (ಸ್ಕಂಧ)ಗಳನ್ನು ಸೂಚಿಸಲಾಗಿದೆ -

ತ್ರಯೋ ಧರ್ಮಸ್ಕಂಧಾ
ಯಜ್ಞೋಽಧ್ಯಯನಂ
ದಾನಮಿತಿ ಪ್ರಥಮಃ
ತಪ ಏವ ದ್ವಿತೀಯೋ
ಬ್ರಹ್ಮಚರ್ಯಾಚಾರ್ಯಂ
ಕುಲವಾಸೀ ತೃತೀಯೋಽತ್ಯಂತಮಾತ್ಮಾನ

ಮಾಚಾರ್ಯಕುಲೇಽವಸಾದಯನ್
ಸರ್ವಂ ಏತೇ ಪುಣ್ಯಲೋಕಾ ಭವಂತಿ
ಬ್ರಹ್ಮಸಂಸ್ಥೋಽಮೃತತ್ವಮೇತಿ
(ಛಾಂ ೨-೨೩-೧)

ದರ್ಮವನ್ನು ಮೂರು ವಿಭಾಗಗಳನ್ನಾಗಿ ಮಾಡಲಾಗಿದೆ. ಇವೇ ದರ್ಮದ ಆಧಾರಸ್ತಂಭಗಳು

ಯಜ್ಞ, ಅಧ್ಯಯನ ಅಥವಾ ಸ್ವಾಧ್ಯಾಯ ಮತ್ತು ದಾನ - ಇವು ಧರ್ಮದ ಮೊದಲ ಸ್ಕಂಧವಾಗಿವೆ

ತಪಸ್ಸು ಮಾಡುವುದು ಎರಡನೇ ಸ್ಕಂಧವಾಗಿದೆ

ಆಚಾರ್ಯರ ಆಶ್ರಯದಲ್ಲಿದ್ದುಕೊಂಡು, ಅವರ ಅನುಮತಿಯಂತೆ ನಡೆದುಕೊಳ್ಳುವ ಬ್ರಹ್ಮಚಾರಿಯು ತನ್ನ ಶರೀರವನ್ನು ಕ್ಷಯಿಸಿಕೊಳ್ಳುತ್ತಾ ಗುರುಸೇವೆ ಮಾಡಿ, ಶಿಕ್ಷಣ ಪಡೆಯುವ ರೀತಿಯು ಮೂರನೇ ಸ್ಕಂಧವಾಗಿದೆ

ಇವೆಲ್ಲವೂ ಪುಣ್ಯಲೋಕಪ್ರಾಪ್ತಿಯಲ್ಲಿ ಸಹ ಭಾಗಿಗಳಾಗಿವೆ ನಾಲ್ಕನೇ ಆಶ್ರಮವಾದ ಸನ್ಯಾಸವು ಅಮೃತತ್ವ ಪ್ರಾಪ್ತಿಯನ್ನು ನೀಡುವುದು

## ಅಧರ್ಮ, ವಿಧರ್ಮದ ರೂಪಗಳು

ಈ ಧರ್ಮ ಶಬ್ದದ ಮೊದಲಲ್ಲಿ ಸ್ವ ಅಕ್ಷರವನ್ನು ಜೋಡಿಸುವುದರಿಂದ ಸ್ವಧರ್ಮ ಶಬ್ದವಾಗುತ್ತದೆ ಹೀಗೆಂದರೆ ತನ್ನ ವರ್ಣಾಶ್ರಮ ಧರ್ಮವನ್ನು ಅನುಸರಿಸುವ ರೀತಿ ಎಂದರ್ಥ

ಅದೇ ಪದಕ್ಕೆ ಮೊದಲಿನಲ್ಲಿ ಪರ ಎಂಬುದನ್ನು ಜೋಡಿಸಿದಲ್ಲಿ ಪರಧರ್ಮ ಶಬ್ದವಾಗುತ್ತದೆ ತನ್ನ ವರ್ಣಾಶ್ರಮಧರ್ಮವನ್ನು ಬಿಟ್ಟು ಬೇರೆ ವ್ಯಕ್ತಿಯ ವರ್ಣಾಶ್ರಮ ಧರ್ಮವನ್ನು ಅನುಸರಿಸುವವನು ಪರದರ್ಮಿಯನಾಗುತ್ತಾನೆ

ಈ ಧರ್ಮಪದಕ್ಕೆ ವಿ ಉಪಸರ್ಗವನ್ನು ಜೋಡಿಸುವುದರಿಂದ ವಿಧರ್ಮ ಶಬ್ದವಾಗುತ್ತದೆ ಅಂದರೆ ವಿಗತಃ ದರ್ಮೇಣ ವಿಧರ್ಮ- ಎಂದಾಗುತ್ತದೆ ತನ್ನ ಧರ್ಮವನ್ನು ಬಿಟ್ಟು ಬೇರೆ ಧರ್ಮವನ್ನು ಹೊಂದಿದವನು (ಧರ್ಮಾಂತರಗೊಂಡವನು) ವಿಧರ್ಮಿಯಾಗುತ್ತಾನೆ ತನ್ನ ಧರ್ಮದ ವಿನಹ ಬೇರೆ ಧರ್ಮಗಳೆಲ್ಲವೂ, ಧರ್ಮಪರಿಪಾಲನೆ ಮಾಡುವವನಿಗೆ ವಿಧರ್ಮಗಳಾಗುತ್ತವೆ

ಧರ್ಮ ಶಬ್ದಕ್ಕೆ ಕು ಉಪಸರ್ಗವನ್ನು ಜೋಡಿಸುವುದರಿಂದ ಕುದರ್ಮ ಶಬ್ದ ಉಂಟಾಗುತ್ತದೆ ಇದರ ಅರ್ಥ ಕುಪ್ಸಿತಃ ಧರ್ಮಃ - ಕುಧರ್ಮಃ ಎಂದಾಗುತ್ತದೆ ಯಾವನು ತನ್ನ ಧರ್ಮವನ್ನು ನಿಂದಿಸುವನೊ ಅವನು ಕುಧರ್ಮಿಯಾಗುತ್ತಾನೆ ಅಂತಹವನ ರೀತಿಯು ಕುಧರ್ಮವಾಗುತ್ತದೆ ಇದು ಪಾಪಾಚರಣೆ (ಕೆಟ್ಟ ಆಚರಣೆ)ಯಾಗುತ್ತದೆ ಓರ್ವ ಧರ್ಮದವನು ಇನ್ನೊಬ್ಬರ ಧರ್ಮಕ್ಕೆ ಅಡ್ಡಿ ಉಂಟುಮಾಡಿದಲ್ಲಿ, ಅದು ಕುಧರ್ಮವೆನಿಸಿಕೊಳ್ಳುತ್ತದೆ ಹೇಗೆಂದರೆ-

ಧರ್ಮಂ ಯೋ ಬಾಧತೇ ಧರ್ಮೋ ನ
ಸ ಧರ್ಮಃ ಕುಧರ್ಮ ತತ್
ಅವಿರೋಧೀ ತು ಯೋ ಧರ್ಮಃ
ಸ ಧರ್ಮಃ ಸತ್ಯವಿಕ್ರಮಃ

ಯಾವ ಧರ್ಮವು ಇನ್ನೊಂದು ಧರ್ಮಕ್ಕೆ ಅಡ್ಡಿಯನ್ನುಂಟುಮಾಡುತ್ತದೆಯೋ, ಅದು ನಿಜ ಅರ್ಥದಲ್ಲಿ ಧರ್ಮವಲ್ಲ ಅದು ಕುಧರ್ಮವೆನಿಸಿಕೊಳ್ಳುತ್ತದೆ ಯಾವ ಧರ್ಮವು ಎಲ್ಲ ಧರ್ಮಗಳ ಅವಿರೋಧವಾಗಿರುತ್ತದೆಯೊ ಅದೇ ಯಥಾರ್ಥ (ನಿಜ ಅರ್ಥದ) ಧರ್ಮವಾಗಿರುತ್ತದೆ

ಧರ್ಮ ಪದಕ್ಕೆ ಮೊದಲಿನಲ್ಲಿ ನಞ್ ಜೋಡಿಸುವುದರಿಂದ 'ನ ಧರ್ಮಃ ಅಧರ್ಮಃ' ಎಂದಾಗಿ, ಅದು ಅಧರ್ಮ ಶಬ್ದವಾಗುತ್ತದೆ ಇದರರ್ಥ ಯಾರು ಧರ್ಮಕ್ಕೆ ವಿರುದ್ಧವಾಗಿ ನಡೆದುಕೊಳ್ಳುವರೊ ಅಂತಹವರು ಈಗಾಗಲೇ ತಿಳಿಸಿರುವಂತೆ ಅಧರ್ಮದ ಪಾಲಕರಾಗುತ್ತಾರೆ

ಈ ಅಧರ್ಮದಲ್ಲಿ ಐದು ತರಹಗಳುಂಟು - ವಿಧರ್ಮ, ಪರಧರ್ಮ, ಧರ್ಮಾಭಾಸ, ಉಪಧರ್ಮ ಮತ್ತೂ ಛಲಧರ್ಮ

ವಿಧರ್ಮ ಮತ್ತು ಪರಧರ್ಮಗಳ ಬಗ್ಗೆ ಈಗಾಗಲೇ ತಿಳಿಸಿಯಾಗಿದೆ

ಡಂಭಾಚಾರದ, ತೋರಿಕೆಯ ಅನುಯಾಯಿಗಳ ಧರ್ಮಾಚರಣೆಯು ಉಪಧರ್ಮವಾಗಿರುತ್ತದೆ ಇಂತಹವರು ಪಾಖಂಡಿಗಳು, ಢೋಂಗಿಗಳಾಗಿರುತ್ತಾರೆ

ಶ್ರುತಿ ಮತ್ತು ಸ್ಮೃತಿಗಳನ್ನು ಬಿಟ್ಟು ಇತರೇ ಗ್ರಂಥಗಳಲ್ಲಿ ಉಕ್ತವಾದುದು 'ಅಸದ್ಧರ್ಮ'ವಾಗಿರುತ್ತದೆ ಇದನ್ನೇ ಧರ್ಮಾಭಾಸ ಎಂದು ಕರೆಯುವುದು ಯಾವುದೋ ಅಸದ್ಧರ್ಮವನ್ನು ನಿಜವಾದ ಧರ್ಮವೆಂದು ಮನಸ್ಸಿನಲ್ಲಿ ಭಾವಿಸಿ ಅನುಸರಿಸುವಿಕೆಯನ್ನು ದರ್ಮಾಭಾಸ ಎಂದೂ ಕರೆಯಲಾಗುತ್ತದೆ

ಪ್ರಚಲಿತ ಅರ್ಥವನ್ನು ಬಿಟ್ಟು ಬೇರೆ ಅರ್ಥವನ್ನು ಕೊಡುವುದರ ಮುಖಾಂತರ ಧರ್ಮದ ಅರ್ಥವನ್ನು ತಿಳಿಸುವಿಕೆಯನ್ನು ಛಲಧರ್ಮ ಎಂದು ಕರೆಯಲಾಗುತ್ತದೆ

ಮೇಲೆ ಕುಧರ್ಮದ ಅರ್ಥವನ್ನು ಕೊಟ್ಟೇ ಇದೆ.

ಒಟ್ಟಿನಲ್ಲಿ ಈ ಆರೂ ರೀತಿಯ ಅಧರ್ಮಗಳನ್ನು ತ್ಯಜಿಸಬೇಕಾದುದು ಮಾನವನ ಕರ್ತವ್ಯ

ಪ್ರತಿಯೊಬ್ಬರೂ ಸ್ವಧರ್ಮದಲ್ಲಿರುವುದೇ ಶ್ರೇಯಸ್ಕರವಾದುದು ಅದರಿಂದಲೇ ಭಗವಂತನು ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ (ಸ್ವಧರ್ಮದಲ್ಲಿ ಮರಣಿಸುವುದು, ಪರಧರ್ಮವು ಭಯಂಕರವಾದುದು) ಎಂದು ತಿಳಿಸಿದ್ದಾನೆ

ಮಾನವ ಕೋಟಿಗೆ, ಸಮಸ್ತ ಪ್ರಾಣಿಗಳಿಗೆ ಇದೇ ಪರಮೋಚ್ಚ ಧರ್ಮವಾಗಿದೆ ಇದರ ಮುಖಾಂತರ ಪರಮಾತ್ಮನಲ್ಲಿ ನಿಷ್ಕಾಮ, ಶಾಶ್ವತ ಹಾಗೂ ಅಚಲವಾದ ಭಕ್ತಿ ಇರಬೇಕಾದುದು ಅವಶ್ಯ ಇದರ ಮುಖಾಂತರ ಪ್ರತಿಯೋರ್ವನ ಆತ್ಮವೂ ಪ್ರಸನ್ನವಾಗಿರುತ್ತದೆ ಯಾರ ಕಡೆ ಧರ್ಮವಿರುತ್ತದೆಯೊ ಅವನಿಗೆ ಸದಾ ಜಯವು ಇದ್ದೇ ಇರುತ್ತದೆ

ಧರ್ಮೇಣ ಹನ್ಯತೇ ವ್ಯಾಧಿ
ಧರ್ಮೇಣ ಹನ್ಯತೇ ಗ್ರಹಃ
ದರ್ಮೇಣ ಹನ್ಯತೇ
ಶತ್ರುರ್ಯತೋ ಧರ್ಮಸ್ತತೋ ಜಯಃ

ಧರ್ಮಾಚರಣೆಯಿಂದ ರೋಗ (ಬಾಧೆಯಿ ಲೆಯು)ವು ನಷ್ಟವಾಗುತ್ತದೆ ಅದರಿಂದ ಗ್ರಹಗಳ ಪೀಡೆಯು ದೂರವಾಗುತ್ತದೆ ಧರ್ಮದಿಂದ ಶತ್ರುನಾಶವಾಗುತ್ತದೆ ಎಲ್ಲಿ ಧರ್ಮವಿದೆಯೊ ಅಲ್ಲಿ ವಿಜಯವಿದ್ದೇ ಇರುತ್ತದೆ - ಎಂಬ ಶ್ಲೋಕವು ಇದನ್ನು ಸ್ಪಷ್ಟಪಡಿಸುತ್ತದೆ

ಇಹಪರ ಸೌಖ್ಯಕ್ಕಾಗಿ ಮನುಷ್ಯನು ಮಾಡದೇಕಾದ ಕಾರ್ಯವನ್ನು 'ಪುಣ್ಯಕಾರ್ಯಾಚರಣೆ' ಎನ್ನುತ್ತಾರೆ ವಿಹಿತವಾದ ಕರ್ಮವನ್ನು ಆಚರಿಸುವುದರಿಂದ, ಅನುಸರಿಸುವುದರಿಂದ ದೊರೆಯುವ ಅದೃಷ್ಟ ವಿಶೇಷವೇ ಪುಣ್ಯ ಮೇಲಿನ ಕಾರ್ಯಾಚರಣೆಯಿಂದ ಇದು ಲಭಿಸುತ್ತದೆ

ಇದು ಕಾಯ, ವಾಕ್ಕು ಮತ್ತು ಮನಸ್ಸು ಎನ್ನುವ ಮೂರು ರೀತಿಗಳಿಂದ ಲಭಿಸುತ್ತದೆ ದಾನ ಇತ್ಯಾದಿಗಳಿಂದ ಶರೀರದ ಮುಖಾಂತರ ಲಭ್ಯವಾಗುವ ಪುಣ್ಯವೇ ಮೊದಲನೆಯದು ಹಿತವಾಗಿ ಮಾತನಾಡುವುದು, ನಿಜವನ್ನು ಹೇಳುವುದು ಇತ್ಯಾದಿ ವಾಗ್ವ್ಯಾಪಾರದಿಂದ ಎರಡನೇ ರೀತಿಯ ಪುಣ್ಯವು ಲಭ್ಯವಾಗುವುದು 'ಅಹಿಂಸಾ ಪರಮೋ ಧರ್ಮಃ' ಎನ್ನು

ವಂತೆ ಪರಹಿಂಸಾ ಪರಿಹಾರವೆನ್ನುವ ಮನಸ್ಸಿನ ವ್ಯವಹಾರದಿಂದ ಮೂರನೇ ಪುಣ್ಯವು ಲಭ್ಯವಾಗುತ್ತದೆ. ಇದೇ ಧರ್ಮ

ಈ ಪುಣ್ಯ ಕಾರ್ಯಾಚರಣೆಯು ಚತುರ್ವಿಧ ಪುರುಷಾರ್ಥಗಳಲ್ಲೊಂದು ಇದರ ವಿವರಗಳು ವೇದದಲ್ಲಿವೆ

ಈ ಧರ್ಮವು ಪ್ರವೃತ್ತ ಮತ್ತು ನಿವೃತ್ತ ಎನ್ನುವ ಎರಡು ರೀತಿಗಳಿಂದ ಕೂಡಿದೆ

ಮಾನವನು ತನ್ನ ಸ್ವಂತ ಅಭ್ಯುದಯಕ್ಕೆ ಸಾಧನ ಭೂತವಾದ ಕಾರ್ಯಗಳನ್ನು ಮಾಡುವಿಕೆಯು ಪ್ರವೃತ್ತ ಧರ್ಮ ಎನಿಸಿಕೊಳ್ಳುತ್ತದೆ ಇದು ಸ್ವಾರ್ಥದಂತೆ ಕಂಡುಬಂದರೂ ಕರ್ತವ್ಯ ನಿರ್ವಹಣೆ ಇದ್ದಲ್ಲಿ, ಬೇರೆಯವರಿಗೆ ತೊಂದರೆಯಾಗದಿದ್ದಲ್ಲಿ ಇದು ಸ್ವೀಕಾರಾರ್ಹವಾದುದು ಇದರಲ್ಲಿ ಸಾತ್ವಿಕ, ರಾಜಸ ಮತ್ತು ತಾಮಸ ಎಂಬ ಮೂರು ವಿಧದ ಧರ್ಮಗಳಿವೆ. ಇದು ತುಂಬಾ ವಿಸ್ತಾರವಾದುದು ಇದು ತುಂಬಾ ಅವಶ್ಯವಾದುದೆಂದೂ ಹೇಳಲಾಗುತ್ತದೆ

ಮೋಕ್ಷಸಾಧನ ಭೂತವಾದುದು ನಿವೃತ್ತಧರ್ಮ

## ಕರ್ತವ್ಯಾಚರಣೆ

ಪ್ರತಿಯೊಬ್ಬರೂ ತಮ್ಮ ತಮ್ಮ ಕರ್ತವ್ಯಗಳನ್ನು ನಿರ್ವಹಿಸಲೇಬೇಕು ಇದನ್ನು ಅವಶ್ಯ 'ಕರ್ತವ್ಯಾಚರಣೆ' ಎಂದು ಕರೆಯುತ್ತಾರೆ ಇದು ಪ್ರತಿಯೊಬ್ಬನ ಧರ್ಮವೂ ಹೌದು

ಈ ಧರ್ಮವೂ - ವರ್ಣಧರ್ಮ, ಆಶ್ರಮ ಧರ್ಮ, ವರ್ಣಾಶ್ರಮಧರ್ಮ, ಗೌಣಧರ್ಮ, ನೈಮಿತ್ತಿಕ ಧರ್ಮ - ಎಂಬ ಐದು ವಿಧಗಳಾಗಿವೆ

ವರ್ಣವನ್ನು ಉದ್ದೇಶಿಸಿ ಹೇಳಿರುವ ಧರ್ಮವೇ ವರ್ಣಧರ್ಮ ಪ್ರತಿಯೊಂದು ವರ್ಣದವರಿಗೂ ಅವರವರದ್ದೇ ಆದ ಧರ್ಮನಿಯಮಗಳಿವೆ ಅವನ್ನು ಆಯಾ ಧರ್ಮದವರು ಪಾಲಿಸಬೇಕು ಉದಾ . ಬ್ರಾಹ್ಮಣರಿಗೆ ಉಪನಯನ ಒಂದು ವಿಹಿತವಾದ ಧರ್ಮ

ಆಯಾಯಾ ಆಶ್ರಮಗಳಿಗೆ ತಕ್ಕಂತೆ ಹೇಳಿರುವ ಧರ್ಮ ಆಶ್ರಮಧರ್ಮ ದಂಡಧಾರಣೆ, ಭಿಕ್ಷಾಚರಣೆಗಳು ಬ್ರಹ್ಮಚರ್ಯಾಶ್ರಮದ ಧರ್ಮ ಪಂಚ ಯಜ್ಞಗಳು, ದಾನ, ಯಜ್ಞಯಾಗಾದಿಗಳು ಗೃಹಸ್ಥಾಶ್ರಮದ ಧರ್ಮ ತಪಸ್ಸನ್ನು ಆಚರಿಸುವುದು ವಾನಪ್ರಸ್ಥಾಶ್ರಮದ ಧರ್ಮ. ಮೋಕ್ಷೋಪಾಯ ಹಾಗೂ ಜ್ಞಾನ ಸಂಪಾದನೆಗಳು ಸನ್ಯಾಸಾಶ್ರಮದ ಧರ್ಮ

ವರ್ಣ ಮತ್ತು ಆಶ್ರಮಗಳೆರಡಕ್ಕೂ ಅನ್ವಯಿಸಿ ಹೇಳಿರುವಂತಹ ಧರ್ಮವು ವರ್ಣಾಶ್ರಮದರ್ಮ

ಪ್ರತಿಯೊಬ್ಬವ್ಯಕ್ತಿಗೂ ಅಗತ್ಯವಾಗಿ ಇರಬೇಕಾದ ಗುಣಗಳ ವಿವರಗಳನ್ನು ನೀಡುವ ಧರ್ಮವು 'ಗೌಣ ಧರ್ಮ' ಎಂದೆನಿಸಿಕೊಳ್ಳುತ್ತದೆ ಪ್ರಜಾಪರಿಪಾಲನೆ, ಯಜ್ಞಯಾಗಾದಿಗಳ ಸಂರಕ್ಷಣೆ - ಇವು ರಾಜನ ಧರ್ಮ ಇತ್ಯಾದಿ

ಯಾವುದಾದರೊಂದು ನಿಮಿತ್ತವನ್ನು ಕುರಿತು ಹೇಳಿರುವ ಧರ್ಮವು 'ನೈಮಿತ್ತಿಕ ಧರ್ಮ'ವಾಗಿರುತ್ತದೆ ಜ್ಞಾನ, ಅಜ್ಞಾನಗಳಿಂದ ಮಾಡಿದ ಪಾಪಗಳ ಪರಿಹಾರಕ್ಕೆ ಮಾಡುವ ಪ್ರಾಯಶ್ಚಿತ್ತ ಇತ್ಯಾದಿಗಳು ಈ ಧರ್ಮದಲ್ಲಿ ಬರುತ್ತವೆ

## ಧರ್ಮದ ರಹಸ್ಯ

ಈ ರೀತಿಯಲ್ಲಿ ಮಾನವನು ಧರ್ಮಾಧರ್ಮ, ಪಾಪಪುಣ್ಯಗಳನ್ನು ಅನುಸರಿಸಿ, ಕರ್ಮಗಳನ್ನು ಮಾಡುವನು . ಅವನು ಮಾಡುವ ಕರ್ಮಗಳನ್ನು ದರ್ಮಾಧರ್ಮದ ಅಳತೆಗೋಲಿನಿಂದ ಅಳೆಯಲಾಗುವುದು ಈ ಸಿದ್ಧಾಂತಾನುಸಾರ ಸ್ಥೂಲವಾಗಿ, ಸೂಕ್ಷ್ಮವಾಗಿ ವಿವೇಕಯುತವಾಗಿ ಧರ್ಮಾಧರ್ಮಗಳನ್ನು ನಿಶ್ಚಯಿಸಿ, ಅದಕ್ಕೆ ತಕ್ಕಂತೆ ಜೀವನ ನಿರ್ವಹಣೆ ಮಾಡಬೇಕು ಇದೇ ಧರ್ಮದ ರಹಸ್ಯ

ಈ ಧಾರ್ಮಿಕ ನಿಯಮಗಳಿಗೆ ಅನುಸಾರವಾಗಿಯೇ ಸಮಸ್ತ ಸೃಷ್ಟಿಯ ಪ್ರವಾಹ ಚಲಿಸುತ್ತಿದೆ ಸ್ವತಃ ಪರಮಾತ್ಮನೇ ಧರ್ಮಸ್ವರೂಪನು ಆತನೇ ಸ್ವತಃ ಈ ವಿಷಯದ ಬಗ್ಗೆ 'ಧರ್ಮೋಽಹಂ ವೃಷರೂಪ ಧೃಕ್(೧೧-೧೭-೧೧)' ಎಂದು ಭಗವದ್ಗೀತೆಯಲ್ಲಿ ತಿಳಿಸಿದ್ದಾನೆ 'ತಪ, ಶೌಚ, ದಯೆ ಹಾಗೂ ಸತ್ಯ ಎನ್ನುವ ನಾಲ್ಕು ಕಾಲ್ಗಳ ವೃಷಭ ರೂಪವನ್ನು ಧರಿಸಿರುವ ಧರ್ಮವು ಸ್ವತಃ ನಾನೇ ಆಗಿರುತ್ತೇನೆ' ಎಂದು ಭಗವಂತನು ಹೇಳಿರುವನು

ವಿಷ್ಣು ಸಹಸ್ರನಾಮದಲ್ಲಿಯೂ ಹೀಗೆಯೇ ತಿಳಿಸಲಾಗಿದೆ 'ಧರ್ಮಗುಬ್ಧರ್ಮಕೃದ್ಧರ್ಮೀ' ಎಂಬಂತೆ ಧರ್ಮವನ್ನು ರಕ್ಷಿಸುವವನು, ಧರ್ಮವನ್ನು ನಿರೂಪಿಸುವವನು ಹಾಗೂ ಸಮಸ್ತ ಧರ್ಮದ ಆಧಾರವೂ ಸ್ವತಃ ಆ ಭಗವಂತನೇ ಆಗಿರುತ್ತಾನೆ

ಅಂತೆಯೇ 'ಧರ್ಮ ಏವ ಹತೋ ಹಂತಿ, ಧರ್ಮೋ ರಕ್ಷತಿ ರಕ್ಷಿತಃ' ಎಂದು ಶಾಸ್ತ್ರಗಳು ತಿಳಿಸಿವೆ ಅಂದರೆ ಧರ್ಮವನ್ನು ತ್ಯಜಿಸುವುದರಿಂದ, ಅದು ಆ ವ್ಯಕ್ತಿಯನ್ನೇ ನಾಶ ಮಾಡುತ್ತದೆ ಅದರಿಂದ ಧರ್ಮದ ರಕ್ಷಣೆ ಅಥವಾ ಪಾಲನೆ ಮಾಡುವವನನ್ನು ಸ್ವತಃ ಧರ್ಮವೇ ಅಂತಹ ವ್ಯಕ್ತಿಯನ್ನು ರಕ್ಷಿಸುತ್ತದೆ

ಭಗವಂತನೇ ದರ್ಮದ ಪ್ರಭುವಾಗಿರುತ್ತಾನೆ. ಅದನ್ನು ನಡೆಸುವವನಾಗಿರುತ್ತಾನೆ 'ಆಚಾರಃ ಪ್ರಭವೋ ಧರ್ಮೋ ಧರ್ಮಸ್ಯ ಪ್ರಭುರಚ್ಯುತಃ' ಎನ್ನುವಂತೆ ಧರ್ಮವು ಆಚಾರ, ಸದಾಚಾರಗಳಿಂದಲೇ ಉತ್ಪನ್ನವಾಗುತ್ತದೆ ಅಂತಹ ಧರ್ಮಕ್ಕೆ ಭಗವಾನ್ ಅಚ್ಯುತನೇ ಪ್ರಭು ಹಾಗೂ ರಕ್ಷಕನಾಗಿರುತ್ತಾನೆ

ಆದುದರಿಂದ ಧರ್ಮವು ಸದಾ ಪಾಲಿಸಲು ಯೋಗ್ಯವಾದ ವಸ್ತುವಾಗಿದೆ 'ಧರ್ಮ ಮೂಲಂ ಹಿ ಭಗವಾನ್ ಸರ್ವದೇವ ಮಯೋ ಹರಿಃ' ಎಂಬಂತೆ ಸರ್ವದೇವತಾಮಯನಾದ ಭಗವಂತನು ಧರ್ಮದ ಮೂಲಸ್ತಂಭವಾಗಿದ್ದಾನೆ ಆತನಿಗೆ ಧರ್ಮದ ಬಗ್ಗೆ ಎಲ್ಲ ವಿಷಯ ವಿವರಗಳೂ ತಿಳಿದಿರುತ್ತವೆ 'ಧರ್ಮೋ ಧರ್ಮ ವಿದುತ್ತಮಃ' ಎಂಬಂತೆ ಧರ್ಮವೇ ಭಗವಂತನ ಸ್ವರೂಪ

ಧರ್ಮ ರಕ್ಷಣೆಗಾಗಿ ಭಗವಂತನು ಅವತಾವೆತ್ತುವನು ಧರ್ಮಾವನಾಯೋರು ಕೃತಾವತಾರಃ (೬-೮-೧೯) ಎಂದು ಸ್ವತಃ ವೇದವ್ಯಾಸರೇ ಶ್ರೀಮದ್ಭಾಗವತದಲ್ಲಿ ಉದಾಹರಿಸಿದ್ದಾರೆ

ಭಗವಂತನೇ ಧರ್ಮರೂಪಿಯಾಗಿ ದರ್ಮದ ನಿಯಮಗಳನ್ನು ರಚಿಸಿದ್ದಾನೆ ಆ ನಿಯಮಗಳಿಂದ ತನ್ನನ್ನು ತಾನೇ ಬಂಧಿಸಿಕೊಂಡಿರುವುದೇ ಅಲ್ಲದೆ ಸಮಸ್ತ ಜೀವ, ಪ್ರಾಣಿಕೋಟಿಯನ್ನೂ ಬಂಧಿಸಿದ್ದಾನೆ ಭಗವಂತನೊಂದಿಗೆ, ಸಮಸ್ತ ಜೀವವರ್ಗವೂ ಅದಕ್ಕೆ ದಾಸರಾಗಿದ್ದಾರೆ ಇದರ ಪರಿಣಾಮವಾಗಿಯೇ ಧರ್ಮಕ್ಕೆ ಹಾನಿಯುಂಟಾಗುವ ಯಾವುದೇ ಸಂದರ್ಭ, ಸನ್ನಿವೇಶ ಬಂದರೂ, ಅದನ್ನು ನಿವಾರಿಸಲು ಸ್ವತಃ ಆತನೇ ತನಗೆ ಇಷ್ಟಬಂದ ಅವತಾರವನ್ನು ಎತ್ತುತ್ತಾನೆ

ಇದನ್ನೇ ಭಗವದ್ಗೀತೆಯಲ್ಲಿ ಸ್ವತಃ ಆತನೇ ಹೇಳಿಕೊಂಡಿದ್ದಾನೆ-

ಯದಾಯದಾಹಿ ಧರ್ಮಸ್ಯ
ಗ್ಲಾನಿರ್ಭವತಿ ಭಾರತ
ಅಭ್ಯುತ್ಥಾನಮಧರ್ಮಸ್ಯ
ತದಾಽತ್ಮಾನಂ ಸೃಜಾಮ್ಯಹಮ್

ಪರಿತ್ರಾಣಾಯ ಸಾಧೂನಾಂ
ವಿನಾಶಾಯಚ ದುಷ್ಕೃತಾಮ್
ಧರ್ಮಸಂಸ್ಥಾಪನಾರ್ಥಾಯ
ಸಂಭವಾಮಿ ಯುಗೇ ಯುಗೇ

'ದರ್ಮಕ್ಕೆ ಹಾನಿಯಾದಾಗಲೆಲ್ಲ ಅಧರ್ಮದ ವೃದ್ಧಿಯಾಗುವುದು ಆಗ ನಾನು ಅವತಾರ ಮಾಡಿ,

(36 ನೇ ಪುಟ ನೋಡಿ)

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

# ಆಲಯದ ಆಡಳಿತ

ಆಂಗ್ಲ ಮೂಲ - ಡಾ|| **ಎಸ್. ರಮೇಶನ್.**

ಕನ್ನಡಾನುವಾದ - **ಬಿ. ಎನ್. ಶ್ರೀನಿವಾಸನ್.**

(ಮುಂದುವರೆದಿದೆ)

ಪಲ್ಲವರ ಕಾಲದಿಂದ ಹಿಂದಿನ ಶತಮಾನಗಳಲ್ಲಿ ದೇವಾಲಯದ ಧಾರ್ಮಿಕ, ಸಾಮಾಜಿಕ ಕಾರ್ಯಕ್ರಮಗಳು ಎಂತಹವು, ಹೇಗಿದ್ದವು, ಅಲ್ಲಿನ ದೈನಂದಿನ ಪೂಜೆ, ಪುರಸ್ಕಾರಗಳು ಹಬ್ಬ ಹರಿದಿನಗಳು ಉತ್ಸವ ಕಾರ್ಯಕ್ರಮಗಳು ಎಂಬುದನ್ನು ತಿಳಿಯಲು ನಮಗೆ ಯಾವುದೇ ಖಚಿತವಾದ ದಾಖಲೆಗಳೂ ದೊರಯುತ್ತಿಲ್ಲ  ಪಲ್ಲವರ ಕಾಲದಿಂದ ವಿಜಯನಗರದ ಕಾಲದವರೆಗೆ ಆಲಯದ ಆಡಳಿತದ ಬಗ್ಗೆ ಒಂದು ಸಾಮಾನ್ಯ ಚಿತ್ರವನ್ನು ನೀಡುವ ಶಾಸನಾಧಾರಗಳು ಇದ್ದರೂ, ಅವುಗಳನ್ನು ಸಮರ್ಥಿಸುವ ಇತರ ಸಾಹಿತ್ಯ ಸಾಹಿತ್ಯೇತರ ಆಧಾರಗಳ ಉಪಲಬ್ಧವಿಲ್ಲವಾಗಿವೆ  ವಿಜಯನಗರದ ಕಾಲದಲ್ಲಿ ಮಾತ್ರವೇ, ಸಮಕಾಲೀನ ರಾಜಕೀಯ, ಸಾಮಾಜಿಕ, ಆರ್ಥಿಕ ಪರಿಸ್ಥಿತಿಗಳ  ಪೂರ್ತಿಯಾದ ಖಚಿತವಾದ ಚಿತ್ರಗಳ ಬಗ್ಗೆ ಆಧಾರಗಳಿದ್ದು, ಆಲಯದ ಆದಾಯ, ವ್ಯಯ, ಆಲಯ ಸೇವಾದಾರರ ಕೆಲಸಗಳ ವಿವರ, ಪರಿಚಾರಕರ ಕರ್ತವ್ಯಗಳು, ಆಚಾರ್ಯಪುರುಷರು, ಮಠಾಧಿಪತಿಗಳು ಇವರ ವಿವರಗಳೂ, ಆಲಯವನ್ನು  ಮದ್ಯಕಾಲೀನ ಯುಗದಲ್ಲಿ ಪ್ರಸಿದ್ಧವಾಗುವಂತೆ ಮಾಡಿದ ರಾಜರ ಮನ್ನೆಯರ ಸಾಮಂತರ ಶ್ರೀಮಂತರ ದಾನ ದತ್ತಿಗಳ ಬಗ್ಗೆ ಪೂರ್ತಿ ವಿವರಗಳೂ ದೊರೆಯುತ್ತವೆ  ಈ ಕಾಲದಲ್ಲಿನ ಆಲಯ್ದ ಚರಿತ್ರೆಯನ್ನು ಸ್ಪಷ್ಟವಾಗಿ  ರೂಪಿಸಲು ತಕ್ಕ ಆಧಾರಗಳು ಈ ಆಲಯದ ಗೋಡೆಗಳ ಮೇಲೆ ಲಿಖಿತವಾಗಿರುವ  ಶಾಸನಗಳ ಮೂಲಕವೇ ದೊರಯುತ್ತವೆ ಈ ಆಧಾರಗಳು ಬಹತೇಕವಾಗಿ ಇತರ  ಸಾಹಿತ್ಯಕ, ಪುರಾವಸ್ತು, ಆಧಾರದಲ್ಲಿ ಸಮರ್ಥನೆ ಹೊಂದುತ್ತವೆ

ವಿಜಯನಗರ ಸಾಮ್ರಾಜ್ಯದ ಪತನಾನಂತರ ಈ ಭಾಗದಲ್ಲಿ  ಅದರ  ಸ್ಥಾನವನ್ನು  ಪಡೆದುಕೊಂಡ ಈಸ್ಟ್ ಇಂಡಿಯಾ ಕಂಪನಿಯು ಕೆಲಕಾಲ ಆಲಯವನ್ನು ತನ್ನ  ಅದಿಕಾರವಲ್ಲಿ ಪಡವಿದ್ದಿತು  ಕ್ರಿಶ 1848 ರ ಹೊತ್ತಿಗೆ ಆಲಯವನ್ನು ಮಹಂತರ ವಶಕ್ಕೆ ಒಪ್ಪಿಸಲಾಯಿತು  ಇವರನ್ನು ಆಲಯದ ವಿಚಾರಣಕರ್ತರೆಂದು ಗುರುತಿಸಿ, ವರ್ಷದುದ್ದಕ್ಕೆ ಆಲಯದಲ್ಲಿ ನಡೆಯಬೇಕಾದ ದೈನಂದಿನ, ವಾರ, ಪಕ್ಷ, ಮಾಸ, ಮಂಡಲ, ಅರೆವರ್ಷ ವಾರ್ಷಿಕ ಉತ್ಸವಗಳ ನಿರ್ವಹಣೆಯ ಜವಾಬ್ದಾರಿಯನ್ನು ಒಪ್ಪಿಸಲಾಯಿತು  ಮಹಂತರ ನಂತರ ಬೇರೆ ಬೇರೆ ಕಾನೂನುಗಳ ಮೂಲಕವಾದ ಧರ್ಮದರ್ಶಿಗಳ ಮಂಡಳಿಯು  ಆಲಯದ ಆಡಳಿತವನ್ನು ನಡೆಸುವಂತಾಗಿ ಇಂದಿಗೂ ಈ ಧರ್ಮದರ್ಶಿಗಳ ಮಂಡಳಿಯ ಜವಾಬ್ದಾರಿಯಲ್ಲೇ ಆಲಯವಿದೆ  ಈಸ್ಟ್ ಇಂಡಿಯಾ ಕಂಪನಿಯವರ ಆಡಳಿತ ಆರಂಭವಾದಾಗಿನಿಂದ ಆಲಯದ ಆಡಳಿತದ ಬಗ್ಗೆ ಬೇರೆ ಬೇರೆ ಸರ್ಕಾರಗಳ ಪ್ರಾಚ್ಯ ವಸ್ತು ಭಂಡಾರದ ಸಾಕ್ಷ್ಯಗಳು ಸಾಕಷ್ಟು - ಪರಿಪೂರ್ಣವೆನ್ನಿಸುವಷ್ಟು - ಉಂಟು ಇದರಿಂದಾಗಿ ಈ ಹಿಂದಿನ ಎರಡು  ಶತಮಾನಗಳಲ್ಲಿ ದೇವಾಲಯದ ದಿಕ್ಕು ದೆಸೆಗಳನ್ನು ಕುರಿತು ತಿಳಿಯಬಹುದಾಗಿದೆ

## ಪಲ್ಲವರ ಹಿಂದಿನ ಕಾಲದಲ್ಲಿ ಆಲಯ

ವೆಂಗಡವನ್ನು ತೊಂಡಮಂಡಲದ ತಿರುವೆಂಗಡಕೋಟ್ಟಂಗೆ  ಸೇರಿದ್ದುದೆಂದು  ಸಾಧಾರಣವಾಗಿ ವಿವರಿಸಲಾಗುತ್ತದೆ   ತೊಂಡ  ಮಂಡಲವೆಂದರೆ ತೊಂಡೆಯರಿಗೆ  ಸೇರಿದ ನಾಡು ಅಥವಾ ತೊಂಡಮಾನನ ಆಡಳಿತಕ್ಕೆ ಸೇರಿದ ನಾಡು ಎಂದು  ಅರ್ಥ ಮಾಡಿಕೊಳ್ಳಬೇಕು

ನಮಗೆ ಈಗ ತಿಳಿದುಬಂದಿರುವ ಆಧಾರಗಳಿಂದಾಗಿ ಪ್ರಾಚೀನ ಕಾಲದಿಂದಲೂ ಈ  ಪ್ರಾಂತ್ಯವನ್ನು 24 ವಿಭಾಗಗಳನ್ನಾಗಿ ಮಾಡಿದ್ದು ಒಂದೊಂದನ್ನೂ ಕೋಟ್ಟಂ ಎಂದು ಕರೆಯುತ್ತಿದ್ದರು  ಈ ಕೋಟ್ಟಂಗಳು ಸಾದಾರಣವಾಗಿ ಒಬ್ಬೊಬ್ಬ ದಳಪತಿಯಿಂದ ಲಷ್ಕರಿ ಆಡಳಿತಕ್ಕೆ ಒಳಗಾಗಿ ಯುದ್ಧ ಮೊದಲಾದ ತುರ್ತು ಸಮಯದಲ್ಲಿ ಜನ ಇಲ್ಲಿನ ಆಡಳಿತ ಕೇಂದ್ರವಾದ ಕೋಟ್ಟಂಗೆ ಬಂದು ಸೇರುತ್ತಿದ್ದರು  ಈ ಭಾಗದಲ್ಲಿ ಇಂತಹ ಇಪ್ಪತ್ನಾಲ್ಕು ಕೋಟೆಗಳ ಉಲ್ಲೇಖವಿದ್ದು ಪ್ರತಿಯೊಂದೂ ಪ್ರತ್ಯೇಕ ಬುಡಕಟ್ಟಿನ ನಾಯಕನ  ಅಧೀನವಾಗಿದ್ದಿತು  ತಿರುವೆಂಗಡ ಕೋಟ್ಟಂ ಇಂತಹ ಒಂದು ತುಂಡುಸ್ಥಳ  ಸಾಮಾನ್ಯವಾಗಿ ಈ ಚಿಕ್ಕ ಚಿಕ್ಕ ಪಾಳಯಗಳು ಒಂದು ಕೇಂದ್ರದ ಅಧೀನಕ್ಕೆ ಬರುತ್ತಿದ್ದುದುಂಟು  ಐತಿಹಾಸಿಕವಾಗಿ ಇಂತಹ ಒಂದು ಕೇಂದ್ರ ಕಂಚಿಯಾಗಿದ್ದಿರಬೇಕು ಹೀಗಾಗಿ ತೊಂಡಮಂಡಲದ ಕೇಂದ್ರವೆಂದು  ಕಂಚಿಯನ್ನು ಪರಿಗಣಿಸಲಾಗಿದೆ

ತಿರುವೆಂಗಡ ದೆಟ್ಟದಿಂದ ಕೂಡಿ ಅದೇ ಹೆಸರನ್ನು ಪಡೆದ  ತಿರುವೆಂಗಡಕೋಟ್ಟಂ - ಚಿತ್ತೂರು, ಚಂದ್ರಗಿರಿ, ತಿರುಚಾನೂರು ಶ್ರೀಕಾಳಹಸ್ತಿ ಭಾಗಗಳನ್ನು ಒಳಗೊಂಡಿತ್ತೆಂದರೆ ಈ ವಿಭಾಗದ ವಿಸ್ತಾರದ ಅರಿವು ಮೂಡುವಂತಾಗುತ್ತದೆ  ಇದು ತೊಂಡಮಂಡಲದ ಅತಿ ಪುರಾತನ ವಿಭಾಗಗಳಲ್ಲಿ ಒಂದಾಗಿದ್ದಿತು  ಭೂ ವಿಭಾಗದ ಅನುಸಾರವಾಗಿ ಈ ಕೋಟ್ಟಂಗಳಲ್ಲಿ ಒಂದೊಂದು ಕೋಟೆ ಪ್ರಧಾನವಾಗಿದ್ದಿರಬೇಕು

ಪ್ರಾಚೀನಕಾಲದಲ್ಲಿ ಪ್ರಥಮವಾಗಿ ವೆಂಕಟೇಶ್ವರಸ್ವಾಮಿಗ ಆಲಯವನ್ನು ನಿರ್ಮಿಸಿ ಇಲ್ಲಿನ ಉತ್ಸವಗಳಿಗ ಏರ್ಪಾಡು ಮಾಡಿದ ತೊಂಡಮಾನನು ತಿರುವಂಗಡಕೋಟ್ಟಂನ ಹಾಗೂ ಸುತ್ತಮುತ್ತಲಿನ ರಾಜ್ಯವನ್ನು ಆಳಿದ ತೂಂಡಮಾನ್ ಜನಾಂಗದ ಅರಸನಾಗಿದ್ದಿರಬೇಕು  ತಿರುಪತಿಯಲ್ಲಿ  ನಡೆಯುತ್ತಿದ್ದ ಉತ್ಸವಗಳ ಬಗ್ಗ ಮಾಮುಲನಾರನು ವಿವರಿಸುವುದರಲ್ಲಿ ಈ  ಮಾತು ಸಮರ್ಥಿತವಾಗುತ್ತದ  ಇದು ತೊಂಡಮ್ರಂಡಲವನ್ನಲ್ಲಿ ಒಂಪು  ಕೇಂದ್ರದ ಕಂಚಿಯ ಆಡಳಿತದ ಅಧೀನಕ್ಕೆ ತರುವುದಕ್ಕಿಂತ ಮೊದಲಿಗ  ಆಗಿರಬೇಕು   ಹೀಗಾಗಿ ತೊಂಡಮಂಡಲವು ಮೊದಲಿಗ ಒಂಪು ಬುಡಕಟ್ಟಿಗ  ಸೇರಿದ ಹಲವು ಪಾಳ

ಯಗಾರರಿದ್ದ - ಇಪ್ಪತ್ನಾಲ್ಕೂ ಆಗಿರಲಿಕ್ಕುಂಟು - ವಿಭಾಗಗಳಾಗಿದ್ದ ಒಂದು ಘಟಕ ವಿಧಾನವಾಗಿ ಕಂಚಿಯ ರಾಜ್ಯದ ಆಳ್ವಿಕೆಯಲ್ಲಿ ಒಂದು ರಾಜ್ಯವಾಯಿತೆಂದೂ ನಾವು ತಿಳಿಯಬಹುದಾಗಿದೆ ಆಂಧ್ರ ವಂಶಗಳ ಅಧಿಕಾರ ಇನ್ನೂ ಪ್ರಸ್ತುತವಾಗಿದ್ದ ಶಾಸನಗಳ ಆರಂಭಕಾಲವಾಗಿದ್ದ ಈ ಅವಧಿಯಲ್ಲಿ ತೊಂಡಮಾನ್ ತರ್ಕೈಯನ ರಾಜ್ಯದ ಉಲ್ಲೇಖವನ್ನು ನೋಡಬಹುದು ತೊಂಡಮಂಡಲ ಏಕೀಕರಣಗೊಂಡ ಮೇಲೆಯೂ ಒಬ್ಬಿಬ್ಬರು ಆಂಧ್ರ ಅಧಿಪತಿಗಳನ್ನು ನೋಡಬಹುದು ಈ ಏಕೀಕರಣದಿಂದಾಗಿ ಈ ಪ್ರಾಂತ್ಯದಲ್ಲಿ ಒಂದು ಕೃಷಿಕ ಸಮಾಜ ಬೆಳೆಯುವಂತಾಗಿ, ಕೃಷಿಕ ಸಂಸ್ಕೃತಿಯೂ ಬೆಳೆಯುವಂತಾಯಿತು.

ಈ ಕಾಲದ ಆಡಳಿತಗಾರರು ಈ ಪ್ರಾಂತ್ಯದಲ್ಲಿ ಹಲವಾರು ಕಡೆ ತಮ್ಮ ಶಾಸನಗಳನ್ನು ಬಿಟ್ಟು ಹೋಗಿರುವವರಾದರೂ ತಿರುಪತಿಯ ಆಲಯದಲ್ಲಿ (ತಿರುಮಲೆಯ ಆಲಯದಲ್ಲಿ) ಯಾವ ಶಾಸನವನ್ನೂ ಹಾಕಿಸಿದಂತೆ ಕಂಡುಬರುವುದಿಲ್ಲ. ಹೀಗೇಕೆ ಎಂಬುದನ್ನು ಹೇಳಬರುವಂತಿಲ್ಲ ಪ್ರಾಚೀನ ಕಾಲದಲ್ಲಿದ್ದಂತೆಯೇ ಈ ಕಾಲದಲ್ಲಿಯೂ ತಿರುಮಲೆಯು ದುರ್ಗಮವಾಗಿದ್ದಿರಬೇಕು. ಆಲಯ ಅಂದಿನ ಕಾಲದಲ್ಲಿ ಅಷ್ಟೊಂದು ಪ್ರಧಾನವಾಗಿ ಇದ್ದಿರದೆ ಹೋಗಿರಬಹುದು. ಉಲ್ಲೇಖನೀಯವಾಗಬಹುದಾದಷ್ಟು ಪ್ರಸಿದ್ಧವಾಗದೆ ಇದ್ದಿರಬಹುದು. ಅಥವಾ ಈಗಾಗಲೇ ತಿಳಿಸಿರುವಂತೆ ಉಲ್ಲೇಖನ - ದಾಖಲಾತಿ ಎಂಬುದೇ ಆ ಕಾಲದಲ್ಲಿ ಅಪರೂಪದ್ದಾಗಿದ್ದಿರಬೇಕು ಪಲ್ಲವರ ಕಾಲಕ್ಕೆ ಬಂದಾಗ, ಆಲಯ ಪೂಜಾ ವಿಧಾನವೂ, ಪದ್ಧತಿಯೂ ಪ್ರಸಿದ್ಧವಾದದ್ದನ್ನು ಕಾಣುತ್ತೇವೆ.

ಸಂಗಂ ಸಾಹಿತ್ಯದಲ್ಲಿ, ಆಳ್ವಾರುಗಳ ಪಾಶುರಗಳಲ್ಲಿ, ಶಿಲಪ್ಪದಿಗಾರಂ - ಕೃತಿಯಲ್ಲಿ ವೆಂಗಡದ ಹಾಗೂ ಶ್ರೀ ವೆಂಕಟೇಶ್ವರಸ್ವಾಮಿಯ ಉಲ್ಲೇಖಗಳ ಬಗ್ಗೆ ಈಗಾಗಲೇ ಹೇಳಿಯಾಗಿದೆ ಈ ಸಾಹಿತ್ಯಕ ಆಧಾರಗಳಿಂದಾಗಿ ಆಲಯದ ಆಡಳಿತ ಹೇಗೆ ಇದ್ದಿತೆಂಬುದು ಅಷ್ಟಾಗಿ ತಿಳಿದುಬರುವುದಿಲ್ಲ ವೈದಿಕ ದೈವವಾದ ವಿಷ್ಣುವಿನ ಆರಾಧನೆ ಈ ಕಾಲಕ್ಕೆ ಅಪರಿಚಿತವಾಗಿರಲಿಲ್ಲ ವೈಷ್ಣವರ ಒಂದು ಪ್ರಮುಖ ದಿವ್ಯದೇಶ (ಒಟ್ಟು 108 ವೈಷ್ಣವ ದಿವ್ಯ ದೇಶಗಳುಂಟು) ಸರಿಯಾದ ಆರಾಧನೆಯಿಲ್ಲದೆ ಅಸಡ್ಡೆ ಗೊಳಗಾಗಿತ್ತು ಎಂದು ನಂಬುವ ಆಧಾರಗಳಾವುವು ಇಲ್ಲ. ಹೀಗಾಗಿ ಮೇಲೆ ಹೇಳಿದ ಪಲ್ಲವ ಪೂರ್ವಕಾಲದಲ್ಲಿಯೂ ತಿರುಮಲೆಯ ದೈವ ದಿನವೂ ಪೂಜೆಗೈಯಲ್ಪಡುತ್ತಿತ್ತು ಎಂದು ಹೇಳುವುದರಲ್ಲಿ ತಪ್ಪೇನಿಲ್ಲ

## ಪಲ್ಲವ ಕಾಲದ ಆಲಯ

**ಪ್ರಾಂತೀಯ ವಿಭಾಗಗಳು :** ತಿ ತಿ ದೇವಸ್ಥಾನಗಳ 219 ನೇ ನಂಬರಿನ ಶಾಸನವು ತಿರುಚುನೂರು (ತಿರುಚಾನೂರು) ನಲ್ಲಿ ದೊರೆತಿದ್ದು ಈ ಊರು ಇದ್ದ ಕುಡವೂರನಾಡು, ತಿರುವೆಂಕಟಕೋಟ್ಟಂ ನೊಡನೆ ಪಲ್ಲವ ರಾಜ್ಯಕ್ಕೆ ಸೇರಿತ್ತೆಂದು ತಿಳಿಸುತ್ತದೆ. ಪಲ್ಲವರನ್ನು ಅನುಸರಿಸಿದ ಚೋಳರ ಕಾಲದಲ್ಲಿ ಅವರ ಆಡಳಿತ ತೊಂಡಮಂಡಲವನ್ನೂ ಒಳಗೊಂಡರೂ, ನಂತರದಲ್ಲಿ ಬಂದ ವಿಜಯನಗರದರಸರಲ್ಲಿಯೂ, ಪ್ರಾಚೀನ ಪಲ್ಲವರ ಕಾಲದ ಪ್ರಾಂತೀಯ ವಿಭಾಗ, ಉಪವಿಭಾಗಗಳು ಹಾಗೇ ಮುಂದುವರೆದವು. ತೊಂಡಮಂಡಲವು ಹಲವು ಕಾಲ ರಾಜೇಂದ್ರ ಚೋಳಮಂಡಳವೆಂದೂ, ಹಾಗೂ ಜಯಕೊಂಡಚೋಳ ಮಂಡಲವೆಂದೂ ಹೆಸರಿನಲ್ಲಿ ಮಾತ್ರ ಪರಿವರ್ತನೆಪಡೆಯಿತು

ತಿರುವೆಂಕಟಕೋಟ್ಟಂ ಎಂಬುದು ತೊಂಡಮಂಡಲ ಅಥವಾ ಜಯಗೊಂಡ ಚೋಳ ಮಂಡಲದ ಒಂದು ವಿಭಾಗವಾದರೂ ಸಹ ಶ್ರೀ ವೆಂಕಟೇಶ್ವರಸ್ವಾಮಿ ನೆಲೆಯಿರುವ ಪವಿತ್ರ ಪರ್ವತದಿಂದಲೇ ತನ್ನ ಹೆಸರು ಪಡೆಯಿತೆಂಬುದು ಸ್ಪಷ್ಟವಾಗಿ, ಆ ಅತಿ ಪ್ರಾಚೀನಕಾಲದಲ್ಲಿಯೂ ಇಲ್ಲಿನ ಸ್ವಾಮಿಯ ಪ್ರಸಿದ್ಧಿಯನ್ನು ಕುರಿತೇ ಹೇಳುತ್ತದೆ. ನಮಗೆ ದೊರಕಿರುವ ಹಲವಾರು ಶಾಸನಗಳಿಂದ ಈ ಕೋಟೆಯು (ಕೋಟ್ಟಂ) ನಾಲ್ಕು ಉಪ ವಿಭಾಗಗಳನ್ನು ಹೊಂದಿದ್ದುವು ಎಂದು ತಿಳಿದು ಬರುತ್ತದೆ ಅವುಗಳೆಂದರೆ - ಕುಡವೂರು ಅಥವಾ ಕುಡವೂರು ನಾಡು ತಿರುಪತಿಯ ಸುತ್ತಮುತ್ತಲ ಗ್ರಾಮಗಳಿಂದ ಕೂಡಿದ್ದಿತು ವೈಕುಂದ ವಲನಾಡು ಎಂಬ ಚಂದ್ರಗಿರಿಯ ಸುತ್ತಲ ಹಳ್ಳಿಗಳಿಂದ ಕೂಡಿದ ಪ್ರಾಂತ್ಯ ಚಿತ್ತೂರು ಬಳಿಯ ಗ್ರಾಮಗಳು ಸೇರಿದ ತುಯ್ಯನಾಡು, ಹಾಗೂ ಕಾಳಹಸ್ತಿಯ ಸುತ್ತಲಿನ ಹಳ್ಳಿಗಳಿಂದ ಕೂಡಿದ ಆರೂರು ಅಥವಾ ತೊಂಡಮಾನ್ ಆರೂರುನಾಡು ಇವುಗಳಲ್ಲಿ ಕುಡವೂರು ಎಂಬ ಸಮುದಾಯಕ್ಕೆ ಹೆಸರು ನೀಡಿದ ಗ್ರಾಮ ಈಗಿಲ್ಲವಾಗಿ, ಶಾಸನಗಳಲ್ಲಿ ತೊಂಡಮಾನ್ ಆರೂರು ಅಥವಾ ಪೆರಿ ಆರೂರು ಎಂದು ಕರೆಯಲ್ಪಟ್ಟಿರುವ ಆರೂರು ಈಗಿನ ಕಾಳಹಸ್ತಿಯ ಬಳಿಯ ತೊಂಡಮನಾಡು ಆಗಿದೆ (1921 ರ ಮದ್ರಾಸು ಶಾಸನ ವರದಿ ಪ್ಯಾರ - 26)

**ಶಾಸನೋಕ್ತ ಪಲ್ಲವರಾಜರು :** ತಿ ತಿ ದೇ ಸಂಗ್ರಹದಲ್ಲಿ ಪಲ್ಲವ ಶಾಸನಗಳು ಅಪರೂಪವಾಗಿದ್ದು ಕೋ ವಿಜಯದಂತಿ ವಿಕ್ರಮ ದೇವರ್ ಹೆಸರು ಹೇಳುವ ತಿರುಚಾನೂರಿನ ಎರಡು ಶಾಸನಗಳು ಬಹುಕಡಿಮೆ ವಿಷಯವನ್ನು ಬಿಟ್ಟುಕೊಡುತ್ತವೆ (ಅತಿಸ್ವಲ್ಪ ವಿಷಯವನ್ನು ವಿವರಿಸುತ್ತ, ಇವುಗಳಲ್ಲಿ ಒಂದು (ಜಿ ಟಿ 219) ರಾಜನ ಆಳ್ವಿಕೆಯ 51 ನೇ ವರ್ಷವನ್ನು ಸೂಚಿಸುತ್ತ ತಿರುವೇಂಕಟ ಕೋಟ್ಟಂ ನಲ್ಲಿದ್ದ ಕುಡವೂರು ನಾಡುವಿನಲ್ಲಿ ತಿರುಚಾನೂರಿನ ಬಗ್ಗೆ ಹೇಳುತ್ತ ದಾನಿಯಾದ ಉಲಗಪ್ಪೆರುಮಾನಾರ್ ವಾಸಸ್ಥಳವಾದ ಚೋಳನಾಡಿ ಸೋಲನೂರು ಪ್ರಾಂತವನ್ನು ಗುರುತಿಸುತ್ತದೆ

ಜಿ ಟಿ 219 ಹಾಗೂ ಜಿ ಟಿ 273 ಶಾಸನಗಳ ಸೋಲನೂರಿನ ಉಲಗಪ್ಪೆರುಮಾನಾರ್ ಹಾಗೂ ಸಿಯಗನ್ (ಗನ್) ಎಂಬ ಇಬ್ಬರು ಪಲ್ಲವ ಮನ್ನೆಯರನ್ನು ನಮ್ಮ ಗಮನಕ್ಕೆ ತರುತ್ತವೆ ಪಲ್ಲವ ರಾಜರ ನೆಲೆಗೊಳಿಸಿದ ಪಶ್ಚಿಮ ಗಂಗರವಂಶದ ಅಯವರ್ಮನ್ ಹಾಗೂ ಸಿಂಹವರ್ಮ ಅಲಿಯಾಸ್ ಮಾಧವ - 2 ಗಳ ಬಗ್ಗೆಯೂ, ತನ್ನ ಸಾಮ್ರಾಟನಾದ ಪಲ್ಲವ ರಾಜನಿಗಾಗಿ ಶ್ರೀಪುರಂ ಬಿಯದ ಯುದ್ಧದಲ್ಲಿ ಅಪರಾಜಿತನ ಪರವಾಗಿ ವರಗುಣ ಪಾಂಡ್ಯನ ಮೇಲೆ ಯುದ್ಧಮಾಡಿ ಅಸುವನ್ನು ತೆತ್ತ ಒಂದನೇ ಪೃಥ್ವಿಪತಿ ಬಗ್ಗೆಯೂ ತಿಳಿಯುತ್ತೇವೆ ಗುಡಿಮಲ್ಲಂ ಶಾಸನದಲ್ಲಿ (1903 ರ 226) ಹೇಳುವಂತೆ ಬಾಣ ರಾಜ ಮಹಾಬಲಿ ಬಾಣರಾಯನಂತೆಯೇ ಪಶ್ಚಿಮ ಗಂಗರ ಸಿಯಗಂಗನೂ ದಂತಿವಿಕ್ರಮ ವರ್ಮನ ಸಾಮಂತರಾಜನಾಗಿದ್ದಿರಬೇಕು ನಮ್ಮ ಸಂಗ್ರಹದ ತಿ ತಿ 429, ಜಿ ಟಿ 229 ರ ಪ್ರಕಾರ ಇದೇ ಪಲ್ಲವ ರಾಜನ ಸಾಮಂತನಾಗಿದ್ದ ಬಾಣ ಹಾಗೂ ಗಂಗರ ಮೇಲಣ ಪಲ್ಲವರ ಈ ಹಿಡಿತ, ಹತೋಟಿಗಳು - ದಕ್ಷಿಣದ ವರಗುಣ ಪಾಂಡ್ಯನ ಧಾಳಿಗಳು ಪಶ್ಚಿಮದಲ್ಲಿ ರಾಷ್ಟ್ರಕೂಟ ಮೂರನೇ ಗೋವಿಂದನ ಆಕ್ರಮಣಗಳ ವಿರುದ್ಧವೂ, ವಿಜಯದಂತಿ ವಿಕ್ರಮ ವರ್ಮನು ಪಲ್ಲವ ರಾಜ್ಯದ ಉತ್ತರಾರ್ಧದಲ್ಲಿಯಾದರೂ ತನ್ನ ಅಧಿಕಾರವನ್ನು ಯಶಸ್ವಿಯಾಗಿ ಸ್ಥಾಪಿಸಿದ್ದನೆಂದು ವಿವರಿಸುತ್ತವೆ ಈತನಿಗೆ ರಾಷ್ಟ್ರಕೂಟರೊಡನೆ ಎರಡು ಕಡೆಯ ನಂಟು ಇದ್ದಿತು

ಮೊದಲನೆಯದು ಈತನ ತಾಯಿ 'ರೇವಾ'ಳ ಕಡೆಯಿಂದ, ಮತ್ತೊಂದು ಸೊಸೆಯಾದ (ಮಗ ನಂದಿವರ್ಮ ತೆಲ್ಲಾರುವಿನ ಹೆಂಡತಿ) ಸಂಖಳ ಕಡೆಯಿಂದ. ಕದಂಬರ ಅಗ್ರಳಮತಿಯನ್ನು ತಾನೇ ವಿವಾಹವಾಗಿ ಅವರ ಬಂಧುವಾಗಿದ್ದ ಈ ನಂಟುತನಗಳು ಅವನ ರಕ್ಷಣೆಗೆ ಬಂದು, ರಾಷ್ಟ್ರಕೂಟ ಮೂರನೇ ಗೋವಿಂದನಿಗೆ ಕಪ್ಪಗಾಣಿಕೆ ನೀಡಿ ತನ್ನ ವಿಧೇಯತೆಯನ್ನು ತಿಳಿಸಿದ ನಂತರ ಶಾಂತಿಯನ್ನು ಪಡೆದು ತೊಂಡ ಮಂಡಲದ ಮೇಲಣ ಪಾಂಡ್ಯ ಆಕ್ರಮಣದ ಅಲೆಯನ್ನೂ ಮರಳಿಸಿದಂತಾಯಿತು

ಮೇಲೆ ಹೇಳಿದ ಎರಡೂ ಶಾಸನಗಳೂ ತ್ರುಟಿತವಾಗಿದ್ದು, ತಿ ತಿ 429 ನೇ ಶಾಸನವು ಬಾಣ ದೊರೆ ವಿಜಯಾದಿತ್ಯನ ವಂಶವೃಕ್ಷವನ್ನು ಸಂಸ್ಕೃತ ಶ್ಲೋಕದಲ್ಲಿ ವಿವರಿಸಿದರೆ, ಜಿ ಟಿ 229 ರ ಶಾಸನವು ಶ್ರೀ ವೆಂಕಟೇಶ್ವರಸ್ವಾಮಿಗೆ ಅವನ ನಿವೇದನೆಗಳ ಏರ್ಪಾಡುಗಳಿಗಾಗಿ ಮಾಡಿದ ಭೂಮಿಯ ದಾನದ ಬಗ್ಗೆ ತಿಳಿಸುವುದು

ಜಿ ಟಿ 233 ಶಾಸನವೂ ತ್ರುಟಿತವಾಗಿದ್ದು ಪ್ರಾಯಶಃ ಪಲ್ಲವರ ಅಧೀನನಾದ ಗಂಗರಾಜ ರಣಸಿಂಹನನ್ನು ಕುರಿತು ಹೇಳುತ್ತದೆ ಗಂಗರೇ ಅಲ್ಲದೆ ಇತರ ಹಲವು ವಂಶಗಳ ಸಾಮಂತರೂ ಪಲ್ಲವಾಧಿಕ್ಯವನ್ನು ಒಪ್ಪಿನಡೆದಂತೆ ಕಾಣುತ್ತದೆ ಇಂತಹವರಲ್ಲಿ (220 ಜಿ ಟಿ ) ಇರಂಗೋಲನೂ - ಇರಂಗೋಲಕನ್ ಅಲಿಯಾಸ್ ಗುಣವಾನ್ ಅಪರಾಜಿತನ್ - ಹೆಸರೇ ಸೂಚಿಸುವಂತೆ ಅಪರಾಜಿತನ ಸಾಮಂತರಲ್ಲಿ ಒಬ್ಬನಾಗಿದ್ದ ಜಿ ಟಿ 218 ರಲ್ಲಿ ಹೇಳುವಂತೆ ಶಕವರ್ಷ 820 (ಕ್ರಿ.ಶ. 898) ನಮ್ಮನ್ನು ಅಪರಾಜಿತನ ಆಡಳಿತದ ಕಡೆಯ ವರ್ಷಕ್ಕೆ ಕರೆದೊಯ್ಯುತ್ತದೆ. ಇದು 9 ನೇ ಶತಮಾನದಲ್ಲಿ ಪಲ್ಲವ ಆಳ್ವಿಕೆಯ ಅಂತ್ಯಕಾಲವೂ ಹೌದು

**ಪಲ್ಲವ ಶಾಸನಗಳ ವಿವರ :** ಇದುವರೆಗೆ ತಿ ತಿ ದೇ ಗಳ ವತಿಯಿಂದ ಪ್ರಕಟವಾಗಿರುವ ಶಾಸನಗಳಲ್ಲಿ ಒಂಬತ್ತು ಮಾತ್ರ ಪಲ್ಲವರ ಕಾಲದ ಶಾಸನಗಳು ಇವುಗಳಲ್ಲಿ ಮೊದಲ ಎರಡು ದಂತಿ ವಿಕ್ರಮದೇವನ ಕಾಲದವುಗಳು ಅವುಗಳಲ್ಲಿ ಮೊದಲನೆಯದು ಆತನ ಆಳ್ವಿಕೆಯ ಐವತ್ತೊಂದನೆಯ ವರ್ಷಕ್ಕೆ ಸೇರಿದ್ದು ಇದು ಕೊನೆಯ ಆಳ್ವಾರ್‌ರಾದ ತಿರುಮಂಗೈ ಆಳ್ವಾರರ ನಂತರದ ತಲೆಮಾರಿನ ಹೊತ್ತಿಗೆ ಎಂದರೆ ಸರಿ ಸುಮಾರು ಕ್ರಿ. 833-834 ರ ಹೊತ್ತಿಗೆ ನಮ್ಮನ್ನು ಕರೆದೊಯ್ಯುತ್ತದೆ ಎರಡೂ ಶಾಸನಗಳೂ ತಿರುವಿಳಂಕೋಯಿಲಿನ ತಿರುವೆಂಗಡದವನ ವಿಗ್ರಹದ ಎದುರಿಗೆ ನಂದಾದೀಪವನ್ನು ನಿರಂತರ ಬೆಳಗಲೆಂದು ವೆಚ್ಚಗಳಿಗಾಗಿ ನೀಡಿದ ಧನದ ಕಾಣಿಕೆಗಳನ್ನು ಗುರುತಿಸುತ್ತವೆ

ತಿ ತಿ ದೇ ಶಾಸನ ಸಂಗ್ರಹದಲ್ಲಿ ಅತಿಪ್ರಾಚೀನವಾದವು ಎಂದರೆ ತಿ ತಿ 8,9 ಆಗಿದ್ದು ಇವು ಮಹೇಂದ್ರ ಪೆನ್‌ಮಾರನ ಆಡಳಿತದ 14 ನೇ ವರ್ಷಕ್ಕೆ ಸಂಬಂಧಿಸಿದ್ದು ಈ ಎರಡೂ ಶಾಸನಗಳಲ್ಲಿನ ವಿಷಯವೆಂದರೆ ಪಲ್ಲವರಾಣಿ ಸಾಮವೈ ತಾನು ತಿರುಮಲೆಯ ಆಲಯದಲ್ಲಿ ಸ್ಥಾಪಿಸಿದ ಬೆಳ್ಳಿಯ ಮಲೆಯಪ್ಪಸ್ವಾಮಿಯ ತದ್ರೂಪದ ಸಾಲಂಕೃತ ವಿಗ್ರಹದ ಪೂಜೆಗೆಂದು, ನಂದಾದೀಪದ ವೆಚ್ಚಕ್ಕೆಂದು ನೀಡಿದ ದಾನದ ವಿವರವಾಗಿದೆ ಜೊತೆಗೇ ತಮಿಳು ಪುರಟ್ಟಾಸಿ, ಹಾಗೂ ಮಾರ್ಗಳಿ ಮಾಸಗಳಲ್ಲಿ ಎರಡು ಉತ್ಸವಗಳಿಗೂ ಏರ್ಪಾಡು ಮಾಡಲಾಯಿತು

ಕ್ರಿಶ 830 ರಲ್ಲಿ ಪಲ್ಲವರಾಜ ವಿಜಯದಂತಿ ವಿಕ್ರಮ ವರ್ಮನ ಆಡಳಿತದ ಐವತ್ತೊಂದನೆಯ ವರ್ಷದಲ್ಲಿ ಅವನ ಅಧೀನ ದಳಪತಿಯಾಗಿದ್ದ ಸೋಳನಾಡಿನ ಸೋಲನೂರಿನ ಉಲಗಪ್ಪೆರುಮಾನಾರನು ತಿರುವಿಳಂಕೋಯಿಲ್ ಪೆರುಮಾನಡಿಗಳ ಮುಂದೆ (ಪ್ರಾಯಶಃ ಶ್ರೀ ವೆಂಕಟೇಶ್ವರ ಸ್ವಾಮಿ ಆಲಯದಲ್ಲಿ ಸ್ಥಾಪನೆಯಾದ ನೂತನ ಮೂರ್ತಿ) ಒಂದು ನಂದಾದೀಪವನ್ನು ಬೆಳಗಿಸಲು ಮಾಡಿದ ಪ್ರಾವಧಾನವನ್ನು ಮೊದಲಸಂಪುಟದ ಮೊದಲ ಶಾಸನದಲ್ಲಿ ಕಾಣುತ್ತೇವೆ

ಎರಡನೆಯ ಶಾಸನವು ವಿಜಯದಂತಿ ವಿಕ್ರಮ ವರ್ಮನ ಇನ್ನೊಬ್ಬ ಪಶ್ಚಿಮ ಗಂಗರ ಸಾಮಂತನಾಗಿದ್ದಿರಬಹುದಾದ ಸಿಯಗಂಗನು ಏರ್ಪಡಿಸಿದ ನಂದಾದೀಪದ ಏರ್ಪಾಡುಗಳನ್ನು ವಿವರಿಸುವುದು

ಮೂರನೆಯ ಶಾಸನವು ವಿಜಯದಂತಿ ವಿಕ್ರಮ ವರ್ಮನ ಸಾಮಂತನಾದ ಬಾಣ ವಂಶದ ಮಹಾಬಲಿ ಬಾಣರಾಯನ ಜನ್ಮವನ್ನು ಸೂಚಿಸುತ್ತದೆ ನಾಲ್ಕನೆಯ ಶಾಸನವು ಪ್ರತಿನಿತ್ಯವೂ ಮೂರು ದೈವಗಳಿಗೆ - ತಿರುವಿಳಂಕೋಯಿಲ್‌ಗಳಿಗೆ (ಮೊದಲನೆಯ ಶಾಸನದಲ್ಲಿ ಗಮನಿಸಲಾದ ಆಲಯದಲ್ಲಿ ಸ್ಥಾಪಿತವಾದ ನೂತನ ಮೂರ್ತಿ), ಉತ್ಸವ, ಹಬ್ಬಗಳ ನಿವೇದನೆಗಾಗಿ ಈತ ಮಾಡಿದ ವ್ಯವಸ್ಥೆಯನ್ನು ತಿಳಿಸುತ್ತದೆ. ಈತ ಹಲವು ಕಳಂಜು ಹೊನ್ನು ದಾನ ನೀಡಿ, ಅದರಿಂದ ಸ್ವಲ್ಪ ಜಮೀನನ್ನು ಕೊಂಡುಕೊಂಡು ಬೇಸಾಯಗಾರರಿಗೆ ಒಪ್ಪಿಸಿ, ಅಲ್ಲಿನ ಬೆಳೆಯನ್ನು ಪಡೆಯಲು ಆಲಯದ ಅಧಿಕಾರಿಗಳಿಗೆ ಹಕ್ಕು ನೀಡಿ, ಆ ಮೂಲಕ ನೈವೇದ್ಯದ ಏರ್ಪಾಡು ಮಾಡಿದನು ಎರಡು ನಿವೇದನಗಳಲ್ಲಿ ಒಂದು ನಂದಿ ಏರಿ - ತಿರುವಮುದು ಎನ್ನಲಾಗಿದ್ದು ನಂದಿಯೇರಿ ಎನ್ನುವ ಕೆರೆಯ ನೀರಿನಿಂದ ಉತ್ಪನ್ನವಾದ ಬೆಳೆಯಿಂದ ನೀಡಿದ ನೈವೇದ್ಯ ಆಗಿದ್ದಿತು

ಐದನೆಯ ಶಾಸನವು ಪ್ರಾಯಶಃ ಪಶ್ಚಿಮ ಗಂಗರ ವಂಶಜನಾದ ಗಂಗೈಗಂಗ ರಣಸಿಂಗನು ರೇವಣಿಯಾಗಿಟ್ಟ ಹಣದ ಬಡ್ಡಿಯ ಮೂಲಕ ದೇವರಿಗೆ ನಿತ್ಯ ನೈವೇದ್ಯದ ಏರ್ಪಾಡು ಮಾಡಿದ್ದನ್ನು ವಿವರಿಸುತ್ತದೆ

ಆರನೆಯ ಶಾಸನವು ಇರುಂಗೋಲದ ರಾಜನಾದ ಇರುಂಗೋಲಕನು (ಗುಣವಾನ್ ಅಪರಾಜತನು) ಸ್ವಲ್ಪ ಚಿನ್ನವನ್ನು ರೇವಣಿಯಾಗಿ ಸಲ್ಲಿಸಿ ಪ್ರತಿದಿನವೂ ಇಬ್ಬರು ಬ್ರಾಹ್ಮಣರ ಭೋಜನಕ್ಕೆ ಶಾಶ್ವತವಾದ ಏರ್ಪಾಡು ಮಾಡಿದ್ದು ತಿಳಿಸುತ್ತದೆ ಇವನ ಹೆಸರಿನಿಂದಾಗಿ ಇವನು, ಕ್ರಿಶ 898 ರಲ್ಲಿ ಚೋಳರಾಜ ಒಂದೇ ಆದಿತ್ಯನಿಂದ ಪದಚ್ಯುತನಾದ ಕೊನೆಯ ಪಲ್ಲವ ಸಾಮ್ರಾಟನಾದ ಅಪರಾಜಿತನ ಸಾಮಂತನಾಗಿದ್ದಿರಬೇಕೆಂದು ತಿಳಿಯುತ್ತದೆ.

ಏಳನೆಯ ಶಾಸನವು ತ್ರುಟಿತವಾಗಿದ್ದು ಕ್ರಿಶ 898 ಶಕವರ್ಷ 820 ಕ್ಕೆ ಸೇರಿ ತಿರುವಿಳಂಕೋಯಿಲಿನ ಸೇವೆಯಲ್ಲಿ ಒಂದು ಹಳ್ಳಿಯ ಆಡಳಿತದ ಆದಾಯವನ್ನು ಬಳಸುವ ಬಗ್ಗೆ ತಿಳಿಸುತ್ತದೆ. ಚೋಳರಾಜನಾಗಲೀ ಪಲ್ಲವ ರಾಜನಾಗಲೀ ಈ ಶಾಸನದಲ್ಲಿ ಹೆಸರಿಸಲ್ಪಟ್ಟಿಲ್ಲ ಕಾರಣ ಇದೊಂದು ಸ್ಥಿತ್ಯಂತರ ಹೊಂದುತ್ತಿದ್ದ ಕಾಲವಾಗಿದ್ದು ಯಾವ ಅಧಿಕಾರವೂ ಇನ್ನೂ ಸ್ಥಾಪಿತವಾಗಿರಲಿಲ್ಲ. ಸ್ಥಳೀಯ ಅಧಿಕಾರಿ ಒಬ್ಬರಿಂದ ಈ ಶಾಸನ ಉಂಟಾಗಿದ್ದಿರಬೇಕು

ಹೀಗಾಗಿ 7 ನೇ ಶತಮಾನದಿಂದ ಆರಂಭಿ ಲದಿಂದ ಪಲ್ಲವರ ಅಧೀನದಲ್ಲಿದ್ದ ಸ್ಥಳೀಯ ರಾ ಪ್ರಮುಖರು, ಪಲ್ಲವ ಸಾಮ್ರಾಟರ ಸಾಮಂತರ ಶ್ರೀ ವೆಂಕಟೇಶ್ವರಸ್ವಾಮಿಯ ಆಲಯದ ಅಭಿವೃ ಯಲ್ಲಿ ಹೊಸ ಹೊಸ ಉತ್ಸವಗಳಿಗಾಗಿ ಮೂ ಮೂರ್ತಿಯ ಪ್ರತಿರೂಪವಾದ ಹೊಸ ಉತ್ಸ ಮೂರ್ತಿಗಳ ಸ್ಥಾಪನೆಯಿಂದ ಹಿಡಿದು ನಿತ್ಯನೈ ವೇದ್ಯ ಅರ್ಚನೆ, ದೀಪ ವ್ಯವಸ್ಥೆಗಳಿಗಾಗಿ ಸುವರ್ಣ ದಾನ, ಗ್ರಾಮದಾನಗಳನ್ನು ಮಾಡಿದ್ದ ಲ್ಲದೆ ಗ್ರಾಮಃ ದಾಯಗಳನ್ನು ನಿತ್ಯಸೇವೆ ನಿವೇದನೆಗಳ ಶಾಶ್ವತ ವ್ಯವಸ್ಥೆಯಲ್ಲಿ ಬಳಸುವಂತೆ ಮಾಡಿದ್ದಾರೆ ಎಂಬು ದನ್ನು ತಿಳಿಯಬಹುದಾಗಿದೆ. ಈ ಪಲ್ಲವ ಯುಗದಲ್ಲಿಯೇ ತಿರುಮಲೆಯ ಆಲಯದಲ್ಲಿ ಮೂಲಮೂರ್ತಿಯ ಮೂರು ಪ್ರತಿರೂಪಗಳನ್ನು ಸ್ಥಾಪಿಸಲಾಯಿತು

ಪಲ್ಲವರ ಕಾಲದ ಅತ್ಯಂತ ಪ್ರಸಿದ್ಧವಾದ ಸಾಮವೈ ರಾಣಿಯ ಶಾಸನವನ್ನು ಈಗಾಗಲೇ ಹಲವು ಸಾರಿ ಪ್ರಸ್ತಾಪಿಸಲಾಗಿದೆ ಶಕ್ತಿ ವಿಟಂಕನೆಂಬ ಕಾಡವರಾಯನು (ಪಲ್ಲವ ರಾಯ) ಕೊಪ್ಪಟ್ರ ಮಹೇಂದ್ರ ಪೆನ್ಮಾರನ ಆಳ್ವಿಕೆಯ ಹದಿನಾಲ್ಕನೆಯ ವರ್ಷದಲ್ಲಿ ಹಾಕಿಸಿದ ಶಾಸನವಿದು ಈತನ ಪತ್ನಿ ಸಾಮವೈರಾಣಿ ಈ ಎರಡು ಶಾಸನಗಳಲ್ಲಿನ ದಾನಿ ಈಕೆ ಪಲ್ಲವ ಪೆರ್ಗಡೆಯರ ಮಗಳು ಈ ಎರಡು ಶಾಸನಗಳಲ್ಲಿನ ಉತ್ಸವ ಮೂರ್ತಿಗಳ - ಈ ಸಂದರ್ಭದಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯ ಮೂಲಮೂರ್ತಿಯನ್ನು ಹೋಲುವ ಬೆಳ್ಳಿಯ ಮೂರ್ತಿಗಳ - ಸ್ಥಾಪನೆಯನ್ನೂ, ಅವುಗಳಿಗಾಗಿ ಉತ್ಸವಗಳನ್ನು ಆರಂಭಿಸಿದ ಏರ್ಪಾಡುಗಳನ್ನೂ, ಈ ಮೂರ್ತಿಗಳ ಏಳುದಿನಗಳ ಮೆರವಣಿಗೆಯ ವ್ಯವಸ್ಥೆಯನ್ನೂ ಕಾಣುತ್ತೇವೆ

ಈ ಶಾಸನಗಳಲ್ಲಿಉಲ್ಲೇಖಿತನಾಗಿರುವ ಕೊಪ್ಪಟ್ರ ಮಹೇಂದ್ರ ಪೆರ್ನ್ಮಾರನೇ ತೊಂಡಮಂಡಲದ ಈ ಭಾಗದ ಸಾಮ್ರಾಟನಾಗಿದ್ದ ಪರಾಂತಕ - II - ಸುಂದರಚೋಳನ ಸಾಮಂತನಾಗಿದ್ದು, ಉತ್ತರ ಆರ್ಕಾಟ್, ಚೆಂಗಲ್ಪಟ್ಟು ಜಿಲ್ಲೆಗಳ ಶಾಸನಗಳಲ್ಲಿ ಹೆಸರಿಸಲ್ಪಟ್ಟಿರುವ ಕೋ ಪಾರ್ಥಿವೇಂದ್ರ ವರ್ಮನೆಂದು ಸಾಮಾನ್ಯವಾಗಿ ಬಗೆಯಲಾಗಿದೆ. ಈ ಶಾಸನವು ಕೇವಲ ನಕಲು ಪ್ರತಿಯಾಗಿರುವುದರಿಂದಾಗಿ, ಮೂಲ ಶಾಸನದ ಲಕ್ಷಣಗಳಿಂದಾಗಿ ತಿಳಿದು ಬರತಕ್ಕ ಕಾಲಗಣನೆಯ ಬಗ್ಗೆ ಏನೂ ಹೇಳಲಾಗದು. ಏನೇ ಆದರೂ ಈ ಶಾಸನ ಪಲ್ಲವ ಸಾಮ್ರಾಟ ಮಹೇಂದ್ರ ವರ್ಮನನ್ನೆ - ಮಹೇಂದ್ರ ಪೆರ್ನ್ಮಾರನೆಂಬ ಹೆಸರನ್ನು ಹೇಳುವುದರಿಂದ,ಉಲ್ಲೇಖಿಸುತ್ತಿರಬಹುದು ಶಕ್ತಿ ವಿಟಂಕನೆಂಬ ಸಾಮಂತನ ಹೆಸರನ್ನು ಹೇಳಿ ಆತನ ಸಾಮ್ರಾಟನನ್ನು ಸೂಚಿಸುವಿಕೆಯೂ ಇದನ್ನು ಪುಷ್ಟಿಗೊಳಿಸುತ್ತದೆ. ಜೊತೆಗೇ ಈ ಶಕ್ತಿ ವಿಟಂಕನ ರಾಣಿ ಸಾಮವೈ ಸಹ ಪಲ್ಲವ ರಾಜಕುಮಾರಿಯೇ ಆಗಿದ್ದಾಳೆ ಹಾಗಾಗಿ ಮಹೇಂದ್ರವರ್ಮನ ಆಡಳಿತದ 14 ನೆಯ ವರ್ಷವೆಂದರೆ ಅದು ಮಾಮಲ್ಲ ನರಸಿಂಹವರ್ಮನ ತಂದೆಯಾದ ಒಂದನೇ ಮಹೇಂದ್ರ ವರ್ಮನೇ ಆಗಿರಬೇಕು ಕಾರಣ ಎರಡನೇ ಮಹೇಂದ್ರವರ್ಮನ ಆಳ್ವಿಕೆ ಅತಿ ಕಿರಿಯ ಕಾಲಾವಧಿಯದಾಗಿದ್ದಿತು ಈ ಗುರುತಿಸುವಿಕೆ ಸರಿಯೆಂದರೆ ಶಾಸನವು ನಮ್ಮನ್ನು ಕ್ರಿ.ಶ.ದ 7 ನೇ ಶತಮಾನಕ್ಕೆ ಸರಿಸುಮಾರು 641 ರ ಹೊತ್ತಿಗೆ ಪಲ್ಲವ ರಾಜ್ಯವನ್ನು ಆಳುತ್ತಿದ್ದ ಒಂದನೇ ಮಹೇಂದ್ರ ವರ್ಮನ ಕಾಲಕ್ಕೆ ಒಯ್ಯುತ್ತದೆ.

## ಪಲ್ಲವರ ಕಾಲದ ಆಲಯ ಆಡಳಿತ

ಹಲವಾರು ಪ್ರಾಚೀನ ಹಾಗೂ ನಂತರದ ಶಾಸನಗಳು ಆಲಯಗಳ ಆಡಳಿತದಲ್ಲಿ ರಾಜಕೀಯ ನಿಯಂತ್ರಣ ಹೊಂದಿದ ತಿರುಚಾನೂರು ಸಭೆಯ ಪಾತ್ರವನ್ನು ನಮ್ಮ ಗಮನಕ್ಕೆ ತರುತ್ತವೆ ಇದರಲ್ಲಿ ಮುಖ್ಯವಾಗಿ ಸ್ಥಳೀಯ ಶ್ರೀ ವೈಷ್ಣವ ಸಮಾಜದಿಂದ ಆಯ್ದು ಬಂದ 108 ಮಂದಿ ಬ್ರಾಹ್ಮಣರಿದ್ದರು ಹಲವು ಸಂದರ್ಭಗಳಲ್ಲಿ ಆಲಯಗಳ ಪರವಾಗಿ ಹೊನ್ನು ಹಣಗಳ ದಾನ ದತ್ತಿಗಳನ್ನು ಭೂಮಿಕಾಣಿಗಳನ್ನು ದಾನಿಗಳಿಂದ ಸ್ವೀಕರಿಸುವ ಕೆಲಸವನ್ನೂ, ಈ ದಾನ ದತ್ತಿಗಳ ಉದ್ದೇಶವಾದ ಆಲಯಾರ್ಚನೆ ಉತ್ಸವ, ನಿವೇದನೆಗಳನ್ನೂ, ನಡೆಸುವ ಜವಾಬ್ದಾರಿ ಹೊತ್ತ ಸಂಸ್ಥೆಯಂತೆಯೂ ಕೆಲಸ ಮಾಡುತ್ತಿದ್ದಿತು ತಿ.ತಿ. 18 ರಲ್ಲಿ ಹೇಳುವಂತೆ ಒಂದು ದಾನದ ಗ್ರಾಮದಲ್ಲಿನ ಭೂಮಿಯನ್ನು ಕರಮುಕ್ತಗೊಳಿಸಿ ದಾನ ನೀಡಲಾಗಿದ್ದು ಈ ಕರಮುಕ್ತಿಯ ರಕ್ಷಣೆಯನ್ನು ಸಭೆಗೆ ಒಪ್ಪಿಸಲಾಗಿದ್ದಿತು ಸಭೆಯ ಈ ರೀತಿಯ ಅಧಿಕಾರಗಳು 11 ನೇ ಶತಮಾನದ ವರೆಗೆ ನಡೆದು ಬಂದು ಆಗ ಯೋಗಿಮಲ್ಲಾವರದಿಂದ ತಿರುಚಾನೂರು ಆಡಳಿತ ಬೇರೆಯಾಗಿ ತಿರುಚಾನೂರಿನ ಗ್ರಾಮಾಡಳಿತಕ್ಕೆ ಮಾತ್ರವೇ ಸೀಮಿತವಾಯಿತು ನಂತರದ ಕಾಲದ - ರಾಜರಾಜ - 3 ನ ಕಾಲದ ಒಂದು ಶಾಸನದ ಪ್ರಕಾರ ಯೋಗಿ ಮಲ್ಲಾವರದ ಶಿವಾಲಯದ ಆಡಳಿತದ ಅಧಿಕಾರ ಸಭೆಯಿಂದ ದೂರವಾಯಿತು ಎಂಬುದು ಸಿದ್ಧವಾಗುತ್ತದೆ

ಸಾರ್ವಜನಿ
ಕಆಡಳಿತರಂಗದಲ್ಲಿ ಹಲವು ರೀತಿಯ ಅಧಿಕಾರಿಗಳನ್ನು ಕಾಣಬಹುದಾಗಿದೆ ಉದಾಹರಣೆಗೆ ದುರವ, ಉರಚ್ಚಿ, ಬಯ್ಯನ್, ಊರ್ ನಿಯೋಗಂ, ಕೋಯಿಲ್‌ಕೋಸ್, ವಳವಕ್ಕೋನ್ ಮೊದಲಾಗಿ ಕಡೆಯ ಇಬ್ಬರು ಆಲಯಗಳ ವಿಷಯಗಳನ್ನು ನೋಡಿಕೊಳ್ಳುವಂತಹವರಾಗಿರಬೇಕು

ಜಿ.ಟಿ 229 ರಲ್ಲಿ ಹೇಳುವ ಮೂವರು ದೇವರುಗಳಲ್ಲಿ ತಿರುವೆಂಕಟತ್ತು ಪೆರುಮಾನಡಿಗಳು ತಿರುಮಲೆಯ ಆಲಯದಲ್ಲಿರುವ ಮೂಲಮೂರ್ತಿ ಶ್ರೀ ವೆಂಕಟೇಶ್ವರಸ್ವಾಮಿಯಾದರೆ - ಮಿಕ್ಕವರು - ತಿರುವಿಳಂಕೋಯಿಲ್ ಪೆರುಮಾನಡಿಗಳು, ತಿರುಮಂತ್ರಸಾಲೈ ಪೆರುಮಾನಡಿಗಳು ತಿರುಮಲೆಯ ಆಲಯದಲ್ಲಿರುವ ಉತ್ಸವ ಮೂರ್ತಿ ಹಾಗೂ ಮತ್ತೊಂದು ಮೂರ್ತಿ ಆಗಿರಬೇಕು

ದಾನದತ್ತಿಗಳನ್ನು ನೀಡಿ ಅವುಗಳ ಪುದುವಟ್ಟಿನಿಂದಾಗಿ ಉತ್ಪನ್ನವಾದ ಬಡ್ಡಿಯ ಹಣದಿಂದಲೂ, ದಾನದ ಭೂಮಿಯ ಆದಾಯ, ಗ್ರಾಮಾದಾಯದಿಂದಲೂ ಶಾಶ್ವತವಾದ ಉತ್ಸವ, ಸೇವೆ, ನಿವೇದನೆಗಳನ್ನು ರಾಜ ಮನೆತನದವರು, ಅಧಿಕಾರಗಣದವರು ನಡೆಸುವ ಅವಕಾಶ ಮಾಡಿಕೊಟ್ಟರು ಸ್ವಾಮಿಯ ಮುಂದೆ ದಾನಿಗಳ ಹೆಸರಿನಲ್ಲಿ ನಂದಾದೀಪವನ್ನು ಶಾಶ್ವತವಾಗಿ ಬೆಳಗಿಸುವಿಕೆಯಿಂದ ಹಿಡಿದು ಪ್ರತಿದಿನವೂ ವಿಗ್ರಹಕ್ಕೆ ಪೂಜೆ ಮಾಡಿ, ನೈವೇದ್ಯ ನೀಡಿ, ವಿಶೇಷ ಸಂದರ್ಭಗಳಲ್ಲಿ ಉತ್ಸವಾದಿಗಳನ್ನು ನಡೆಸುವುದರ ವರೆಗೆ ಈ ಸೇವೆಗಳು ಹರವನ್ನು ಪಡೆದಿದ್ದವು. ಈ ಸೇವೆಗಳ ಜೊತೆಗೇ ತಿರುಮಲೆಗೆ ದೇವರನ್ನು ಪೂಜಿಸಲು ನಿತ್ಯವೂ ಬರುತ್ತಿದ್ದ ಬ್ರಾಹ್ಮಣರ ಭೋಜನವನ್ನೂ ನಂತರದಲ್ಲಿ ಸೇರಿಸಲಾಯಿತು

ಈ ಒಂದು ವ್ಯವಸ್ಥೆಯು ನಂತರದ ಕಾಲದಲ್ಲಿ ಎಷ್ಟು ವ್ಯಾಪಕವಾಯಿತೆಂದರೆ ಪ್ರತಿಯೊಂದು ದಿನವೂ ಉತ್ಸವದಿನವಾಗಿ ದಾನಿಗಳಿಂದಾಗಿ ಪರಿವರ್ತಿತವಾಗಿ ಅವುಗಳ ಶಾಶ್ವತ ಆಚರಣೆಗೆ ಅಗತ್ಯವಾದ ಇಡುಗಂಟಿನ ವ್ಯವಸ್ಥೆಯಾಯಿತು

ಆಲಯವು ಒಂದು ಸಂಸ್ಥೆಯ ಆಡಳಿತಕ್ಕೆ ಒಳಪಟ್ಟಿದ್ದರಿಂದ ದೂರ-ಬಾರದ- ಜನ ತಮ್ಮ ದಾನ ದತ್ತಿಗಳನ್ನು ಈ ಸಂಸ್ಥೆಗೆ ನಂಬಿಕೆಯಿಂದ ಒಪ್ಪಿಸಿ ತಾವು ಅಪೇಕ್ಷಿಸಿದ ಸೇವೆ ಶಾಶ್ವತವಾಗಿ ಯಾವುದೇ ಅಡೆತಡೆಗಳಿಲ್ಲದಂತೆ ನಡೆಯುವ ಬಗ್ಗೆ ನಿರಾತಂಕವಾಗಿರಲು ಸಾಧ್ಯವಾಯಿತು ಇಡೀ ಗ್ರಾಮವೇ ಒಂದು ಸಂಸ್ಥೆಯ ಅಧೀನವಾಗಿ ಒಬ್ಬ ಕಾರ್ಯದರ್ಶಿಯಂತಹವರು (ಶ್ರೀಕಾರ್ಯಂ) ಇದ್ದರು ತಿರುಚಾನೂರು ಆಲಯದ ನಾಲ್ಕನೇ ಶಾಸನವು 'ಶ್ರೀಕಾರ್ಯಂ' ನಲ್ಲಿ ರೇವಣಿಯಾಗಿಟ್ಟ ಚಿನ್ನದ ಮೊತ್ತವನ್ನು ತಿಳಿಸುತ್ತ, ಈ ಕಾಣಿಕೆಯನ್ನು ಸಾರ್ವಜನಿಕವಾಗಿ ಉದ್ಘೋಷಿತಗೊಳಿಸದೇಕೆಂದೂ, ಪಟ್ಟಣಜನರ ಆಜ್ಞೆಯಂಬಂತೆ - ಊರ್ ನಿಯೋಗಂ - ಎಂಬಂತೆ ಪ್ರತ್ಯೇಕವಾದ ದಾಖಲಾತಿ ಕಡತದಲ್ಲಿ ಬರೆದು ರಕ್ಷಿಸಬೇಕೆಂದೂ ತಿಳಿಸುತ್ತದೆ ಇದು ಮಂತ್ರಸಾಲೆಯ - ಇಳಂಕೋವಿಲ್‌ನ ದೇವರ ಹಾಗೂ ತಿರುವೆಂಗಡದ ದೇವರ ಪ್ರಯೋಜನಕ್ಕಾಗಿ ಬಳಕೆಯಾಗುವಂತಹದು ಆರನೆಯ ಶಾಸನ ಆಲಯದಲ್ಲಿ ಇಬ್ಬರು ಬ್ರಾಹ್ಮಣರಿಗೆ ಪ್ರತಿದಿನ ಬೋಜನ ನೀಡುವ ವ್ಯವಸ್ಥೆಗೆ ಸಂಬಂಧಿಸಿದ್ದು ಏಳನೆಯದು ಶಕವರ್ಷ 820 ರ (ಕ್ರಿ.ಶ 898) ಶಾಸನವಾಗಿದ್ದು ಹಳ್ಳಿಯ ಆದಾಯವನ್ನು ಪೂರವು - ಒಂದುಸಾವಿರ ಕಡಿ - ಎಂಬುದಾಗಿ ತಿಳಿಸುತ್ತದೆ ಸರಕಾರಕ್ಕೆ ಗ್ರಾಮ ನೀಡದೇಕಿದ್ದ ಕರವನ್ನು ಸೂಚಿಸುವ ಈ ಶಾಸನ ತ್ರುಟಿತವಾಗಿದ್ದರೂ ನಂತರದ ಕಾಲದಲ್ಲಿನ ದಾಖಲೆಗಳು ವಿವರಿಸುವಂತೆಯೇ ಇಲ್ಲಿನ ಗ್ರಾಮವ್ಯವಸ್ಥೆಯೂ ಇದ್ದಿತೆಂಬುದು ತಿಳಿದುಬರುತ್ತದೆ ಎಂಟು ಹಾಗೂ ಒಂಬತ್ತನೆಯ ದಾಖಲೆಗಳು ಕೋ-ಪಾರ್ಥಿವೇಂದ್ರವರ್ಮನ ಆಡಳಿತದ 14 ನೆಯ ವರ್ಷಕ್ಕೆ ಸಂಬಂಧಿಸಿದ್ದು, ಪಾರ್ಥಿವೇಂದ್ರ ವರ್ಮನ ಅಧೀನನಾಗಿದ್ದ ಪಲ್ಲವ ರಾಜ ಕಾಡವರಾಯನ ಪತ್ನಿ ಸಾಮವೈರಾಣಿಯು ನೀಡಿದ ಕಾಣಿಕೆಗಳ ಬಗ್ಗೆ ಹೇಳುತ್ತದೆ ಈ ಹೆಂಗಸಿನ ಬಿರುದು 'ಕಾಡವನ್ ಪೆರುಂದೇವಿ' ಈಕೆಯನ್ನು ಪಲ್ಲವ ಪೆರ್ಗಡೆಯ ಮಗಳೆಂದು ಕರೆಯಲಾಗಿದೆ ಪರ್ಗಡೆ-ಹೆಗ್ಗಡೆ ಪಲ್ಲವ ಪ್ರಮುಖನೋರ್ವನ ಪುತ್ರಿಯೆಂದು ತಿಳಿಯಬಹುದು ಈಕೆ ನೀಡಿದ ದಾನ 'ವೇಂಗಡದ ಮೇಲೆ ನಿಂತಿರುವ ದೇವರಿಗೆ' ಈಕೆ ಮೂಲದೇವರ ಪ್ರತಿಮೂರ್ತಿಯಾದ ಬೆಳ್ಳಿಯ ವಿಗ್ರಹವನ್ನು ಮಾಡಿಸಿ ಅದಕ್ಕೆ ಹಲವಾರು ಆಭರಣ

ಗಳನ್ನು ತೊಡಿಸಿದಳು ಈ ಆಭರಣಗಳಲ್ಲಿನ ಚಿನ್ನ 47 ಕಳಂಜು ಎಂದು ಹೇಳಲಾಗಿದೆ ಈ ಕಾಣಿಕೆಯನ್ನು ಆಲಯಕ್ಕೆ ನೀಡಿದ ನಂತರ 3000 ಕುಳಿಯ (ಕುಂಟೆ?) ಭೂಮಿಯನ್ನು ಘಟಿಕರ (ಬ್ರಾಹ್ಮಣ ಅಗ್ರಹಾರದ) ಮಾನದಲ್ಲಿ 16 ಅಳತೆಯ ಮೂರು ಪಟ್ಟಿ ಭೂಮಿಯನ್ನು ನೀಡಿದಳು

ಈ ಭೂಮಿಯನ್ನು ಆಕೆ ಬೇರೆ ಬೇರೆ ಕಡೆಗಳಿಂದ ಕೊಂಡುಕೊಂಡಳೆಂದು ದಾಖಲಾಗಿದೆ ತಿರುಚಾನೂರಿನ ಸಭೆಯೂ ಇವುಗಳಲ್ಲಿ ಒಂದು ಒಬ್ಬಾನೊಬ್ಬ ಲಕ್ಷ್ಮಣ ನಂಬಿ (ಮಠದ ಕಾರ್ಯದರ್ಶಿ)ಯೂ ಒಬ್ಬನಾಗಿದ್ದನು ಇಳಂಕೋವಿಲ್‌ನ ದೇವರು ಮತ್ತೊಂದು ಇವರೆಲ್ಲರಿಗೆ ಅವರವರ ಭೂಮಿಗೆ ತಕ್ಕ ಬೆಲೆಯನ್ನು ಕೊಟ್ಟುಕೊಳ್ಳಲಾಯಿತು ಈ ಜಮೀನನ್ನು ಕರ ಮುಕ್ತಗೊಳಿಸಲು ಅನುವಾಗುವಂತೆ ಸಭೆಗೂ, ಸಂಬಂಧದ ದೈವಕ್ಕೂ ತಕ್ಕ ಹಣವನ್ನು ನೀಡಲಾಯಿತು ಇವೆಲ್ಲವನ್ನೂ ಸಾಧಿಸಿದ ನಂತರ ಒಟ್ಟು ಜಮೀನನ್ನು ವರ್ಷದ ಒಂದು ನಿರ್ದಿಷ್ಟ ದಿನದ ಉತ್ಸವದ ವೆಚ್ಚಗಳನ್ನು ತೂಗಿಸಲು ಆಲಯಕ್ಕೆ ಒಪ್ಪಿಸಲಾಯಿತು ತಿರುವೆಂಗಡದ ಮಠದ ಕಾರ್ಯಕರ್ತರಿಗೆ ಈ ಉತ್ಸವದ ಸಂಬಂಧದ ಎಲ್ಲ ಹೊಣೆಯನ್ನು ಒಪ್ಪಿಸಲಾಯಿತು ಸಭೆಯವರು ಜಮೀನನ್ನು ಒಪ್ಪಿಕೊಂಡು ಅದರ ಕೃಷಿಗೆ ವ್ಯವಸ್ಥೆ ಮಾಡಬೇಕಾಗಿದ್ದಿತು ಈ ದಾನವು ಸೂರ್ಯಚಂದ್ರರಿರುವ ವರೆಗೆ ನಡೆಯತಕ್ಕದ್ದು ಇಡೀ ವ್ಯವಸ್ಥೆಯನ್ನು ಶ್ರೀ ವೈಷ್ಣವರು ಆಗ ಮಾಡಿಸಬೇಕು

ನಂತರದ ದಾನವೂ ಇದೇ ರೀತಿಯದಾಗಿದ್ದು, 4176 ಕುಳಿ (ಕುಂಟೆ?) ಭೂಮಿಯನ್ನು ಮಠದ ಕಾರ್ಯನಿರ್ವಾಹಕರಿಗೆ ಒಪ್ಪಿಸಿ, ಮಾರ್ಗಳಿ ತಿಂಗಳ (ಡಿಸೆಂಬರ್ - ಜನವರಿ) ಶುದ್ಧ ದ್ವಾದಶಿಯ ದಿನ ಉತ್ಸವವನ್ನು ನಿರ್ವಹಿಸಲು ನೀಡಲಾಯಿತು ಹೀಗಾಗಿ ಶಾಸನಗಳಲ್ಲಿ ಕಂಡುಬರುವಂತೆ ಪಲ್ಲವರ ಕಾಲಕ್ಕೇನೆ ಆಲಯದ ಆಡಳಿತ ಸುಸೂತ್ರವಾಗಿ, ಸುವ್ಯವಸ್ಥಿತವಾಗಿ ನಡೆಯುವ ಪದ್ಧತಿಯನ್ನು ಪ್ರವೇಶಗೊಳಿಸಲಾಗಿದ್ದುತು

ಆಲಯಕ್ಕೆ ಕಾರ್ಯಕ್ರಮ ನಿರ್ವಹಣೆಗೆ ತಕ್ಕ ವ್ಯವಸ್ಥೆ ಯಂತ್ರಾಂಗ ಉಂಟಾಗಿದ್ದದ್ದೇ ಅಲ್ಲದೆ, ಗ್ರಾಮ ಸಭೆಗಳ ಕಾರ್ಯನಿರ್ವಹಣೆಯ ಸಶಕ್ತವಾಗಿ, ಸವ್ಯಥವಾಗಿ ನಡೆಯುತ್ತಿದ್ದುದನ್ನು ಕಾಣಬಹುದಾಗಿದೆ ಗ್ರಾಮಸಭೆಗಳಲ್ಲಿ ಬಲವಾರು ವಿಭಾಗಗಳಿದ್ದು ಲೆಕ್ಕ ಪರಿಶೋಧನ ಸಮಿತಿ, ಭೂಮಿಯ ನಿರ್ವಹಣೆ, ಮಾರಾಟ, ವಿತರಣೆ, ಜಮಾಬಂದಿ, ದಾನಿಗಳ ಅಪೇಕ್ಷೆಯಂತೆ ಅವುಗಳ ಮೇಲು ವಿಚಾರಣೆ, ಅವುಗಳನ್ನು ಕರ ಮುಕ್ತಗೊಳಿಸುವಿಕೆ- ಇತ್ಯಾದಿಗಳೆಲ್ಲ ಸುಸೂತ್ರವಾಗಿ ನಡೆಯುತ್ತಿದ್ದವು ಆಲಯಗಳ ಆಡಳಿತದಲ್ಲಿ ಒಂದು ಸುಲಭತೆಯನ್ನು ಇದ್ದಕಿದ್ದಂತೆ ಒಮ್ಮೆಲೇ ತರಲಾಗಲಿಲ್ಲವೆಂಬುದು ಸ್ಪಷ್ಟವೇ ಇದೆ. ಹಾಗಾಗಿ ಆಧಾರಗಳ ಕೊರತೆ ಇದ್ದರೂ ಸಹ, ಆಲಯಗಳ ಆಡಳಿತ ಪೂಜೆ ಬಹುಕಾಲದಿಂದ ನಡೆದು ಬಂದು ಬಲವಾಗಿ ನೆಲೆಯೂರಿದ್ದವೆಂಬುದರಲ್ಲಿ ಯಾವ ಅನೌಚಿತ್ಯವೂ ಇರದು

## ಆಲಯ ದಾಖಲೆಗಳಲ್ಲಿ ಕಂಡುಬರುವ ಆರ್ಥಿಕ ಪರಿಸ್ಥಿತಿ

ಆಲಯದ ಭೂಮಿಯನ್ನು ಕೃಷಿಮಾಡಲು ಸಾಧಾರಣವಾಗಿ ನೀಡಲಾಗುತ್ತಿದ್ದಿತು ಜಿ ಟಿ 229 ಪ್ರಕಾರ ಆಲಯ ಭೂಮಿಯನ್ನು ಸಾಗುವಳಿ ಮಾಡುವವನು ಸಾಮಾನ್ಯವಾಗಿ ಅದೇ ನಾಡುವಿನಲ್ಲಿ ವಾಸ ಮಾಡುವವನಾಗಿರಬೇಕು ಇದರಿಂದಾಗಿ ಜಮೀನಿನ ಸಾಗುವಳಿಯೂ, ಉತ್ಪನ್ನದ ಸಂಗ್ರಹವೂ ಸುಲಭತರವಾಯಿತು ದೇವರಿಗೆ ನಿವೇದಿಸುವ ಅಕ್ಕಿಯನ್ನು ಪರಿಶುದ್ಧಗೊಳಿಸಿರಬೇಕು 80 ಬಾರಿಯಾದರೂ ಕುಟ್ಟಿರುವಂತಹ ಅತಿ ಶುಭ್ರವಾದ ಅಕ್ಕಿಯಿಂದ ಮಾಡಿದ ಅನ್ನವೇ ಭಗವಂತನಿಗೆ ನಿವೇದನೆಯಾಗಬೇಕು ದಾನ ನೀಡಿದ ಚಿನ್ನವು ಶುದ್ಧ ಆಗಿದ್ದು, ಆಲಯದಲ್ಲಿ ಒಪ್ಪಿಸುವ ಮೊದಲು ಸರಿಯಾಗಿ ಖಚಿತವಾಗಿ ತೂಕ ಹಾಕಿ ನೀಡಬೇಕು. ಚಿನ್ನದ ತೂಕದ ಮಾನ ಕಳಂಜು ಆಗಿದ್ದಿತು ಜಮೀನಿನ ಮಾಪನದ ಅಳತೆಗೋಲು 'ಕಡಿಕ್ಕೈ-ಕೋಲ್' ಆಗಿದ್ದಿತು ಇದು 16 ಕೈಯಳತೆಯ ಸರಪಳಿಯಾಗಿರುತ್ತಿದ್ದು ಕುಳಿ (ಕುಂಟೆ?)ಯ ಮಾನದಲ್ಲಿ ಅಳೆಯುತ್ತಿದ್ದರು ಇವು ಒಂದು ಸಾವಿರವಿದ್ದಾಗ ಒಂದು ಪಟ್ಟಿಯಾಗುತ್ತಿದ್ದಿತು

ತಿ ತಿ 18 ರಲ್ಲಿ ಹಲವು ರೀತಿಯ ಆಭರಣಗಳನ್ನು ಹೆಸರಿಸಲಾಗಿದೆ ದೇವರಿಗೆ ಅಲಂಕಾರಕ್ಕೆಂದು ಈ ಆಭರಣಗಳನ್ನು ಬಳಸಲಾಗುತ್ತಿದ್ದಿತು ಇವುಗಳನ್ನು ಚಿನ್ನದಿಂದ ಮಾಡಿಸಿ, ವಜ್ರ, ವೈಡೂರ್ಯ, ಗೋಮೇದಿಕ, ಇಂದ್ರನೀಲ ಮೊದಲಾದವುಗಳನ್ನು ಇವುಗಳಲ್ಲಿ ಹುದುಗಿಸುತ್ತಿದ್ದರು ಅಮೂಲ್ಯ ಅನರ್ಘ್ಯ ಹರಳುಗಳು ಬಳಕೆಯಲ್ಲಿದ್ದು ಇದರಿಂದಾಗಿ ಕಲೆಗಾರಿಕೆ ಉಚ್ಛ್ರಾಯ ಸ್ಥಿತಿಯಲ್ಲಿದ್ದಿತೆಂದೂ, ದೇಶದಲ್ಲಿ ಉನ್ನತವಾದ ನಾಗರಿಕತೆಯಿದ್ದಿತೆಂದೂ ತಿಳಿಯಬಹುದು ಆಂತರಿಕ ಸಂಪರ್ಕವನ್ನು ಸುಮಾರ್ಗ ನಿರ್ಮಾಣದಿಂದ ಸಾಧಿಸಲಾಗಿದ್ದು ರಸ್ತೆಗಳ ಜಾಲದಿಂದಾಗಿ ವ್ಯಾಪಾರ ವಹಿವಾಟು ಸುಲಭವಾಗಿದ್ದಿತೆಂದು ಭಾವಿಸಬಹುದು ಉತ್ತರದ ಮಾರ್ಗವು (ವಡಗು ವಳಿ) ರಾಜಮಾರ್ಗವಾಗಿದ್ದು ತಮಿಳು ದೇಶದಿಂದ ಮೇಲಿನ ವೆಂಗಿಯವರೆಗೂ ಅಲ್ಲಿಂದ ಮುಂದಕ್ಕೂ ಹರಡಿದ್ದಿತು ಇದು ತಿರುಚಾನೂರಿನ ಮಾಲಿಕ ಹಾದು ಹೋಗುತ್ತಿದ್ದಿತು ವ್ಯವಸಾಯಕ್ಕೆ ಪ್ರಾಧಾನ್ಯ ನೀಡಿ, ಕೆರೆ ಕಟ್ಟೆಗಳನ್ನು ಕಾಲುವೆಗಳನ್ನು ಸುವ್ಯವಸ್ಥೆಗೊಳಿಸಿ ನೀರಾವರಿಯನ್ನು ನೋಡಿಕೊಳ್ಳಲಾಗುತ್ತಿದ್ದಿತು ಚೋಳರ ಕಾಲದಲ್ಲಿ ಕಂಡು ಬರುವಂತಹ ವೈವಿಧ್ಯಮಯವಾದ ಸುಂಕಗಳು ಪಲ್ಲವರ ಕಾಲದಲ್ಲಿ ಕಂಡುಬರುವುದಿಲ್ಲ ಕೇವಲ ಸಾಂಪ್ರದಾಯಕವಾದ ಕರ್ತವ್ಯಕಾಣಿಕೆ (ಕರ) ಮಾತ್ರವೇ ನೀಡಬೇಕಾಗಿದ್ದಿತು (ಕಡಮ್ಮೆ ಕುಡುಮ್ಮೈ)

(ಮುಂದಿನ ಸಂಚಿಕೆಯಲ್ಲಿ

-ಚೋಳರ ಕಾಲದಲ್ಲಿ ಆಲಯ)

---

(30ನೇ ಪುಟದಿಂದ)

ಅದನ್ನು ದೂರಮಾಡುತ್ತೇನೆ ಸಾಧುಗಳ ರಕ್ಷಣೆ, ದುಷ್ಟರ ನಾಶ, ಅದರ ಮುಖಾಂತರ ಮತ್ತೆ ಧರ್ಮವನ್ನು ಸ್ಥಾಪನೆಮಾಡುವುದು - ಈ ಮೂರು ಕರ್ಮಗಳಿಗಾಗಿ ನಾನು ಪ್ರತಿಯುಗದಲ್ಲೂ ಪ್ರಕಟಗೊಳ್ಳುತ್ತೇನೆ'

ಭಗವಂತನ ನಿಯಮಗಳು ಎಂದಿಗೂ ಬೇರೆಯಾಗಿಯೂ ಉಳಿದಿಲ್ಲ, ಅಸಫಲವೂ ಆಗಿಲ್ಲ ಆತನ ಹಿರಿಮೆ ಆತನ ಕೃಪೆಯಿಂದಲೇ ಅರ್ಥವಾಗುವುದು

ಧರ್ಮದ ಸ್ವರೂಪವು ಕೈಗೆಟಕುವಂತೆ ಸುಲಭವಾಗಿದ್ದರೂ, ಅರ್ಥವಾಗದ ಕಬ್ಬಿಣದ ಕಡಲೆಯಂತೆ ಇರುತ್ತದೆ ಅದರ ಅರ್ಥ ಗಹನವೂ, ವಿಸ್ತಾರವಾದುದೂ ಆಗಿದೆ ಪ್ರತಿಯೊಂದು ಜನಾಂಗದಲ್ಲೂ ಅದರದೇ ಆದ ಧರ್ಮದ ಚೌಕಟ್ಟಿದ್ದರೂ, ಎಲ್ಲ ಧರ್ಮಗಳಲ್ಲಿಯೂ ಕೆಲವೊಂದು ವಿಚಾರಗಳಲ್ಲಿ ಏಕ ರೂಪತೆ ಇರುತ್ತದೆ ಸತ್ಯವನ್ನೆ ಹೇಳು, ನಿಜ ಅರ್ಥದ ಮಾನವನಾಗಿರು, ಪರೋಪಕಾರ ಮಾಡು, ಜನರ ಉದ್ಧಾರಕ್ಕಾಗಿ ಶ್ರಮಿಸು, ಬಡವರ ಮೇಲೆ ಅನುಕಂಪ ತೋರಿಸು - ಇತ್ಯಾದಿಗಳು ಪ್ರಪಂಚದ ಎಲ್ಲ ಧರ್ಮಗಳಲ್ಲೂ ಇದೆ

ಈ ಸತ್ಯವನ್ನು ಅರಿತವರು ಸದ್ಧರ್ಮ ಜೀವನ ತಪ್ಪದೆ ನಡಸುವರು ಇದು ವಿಶ್ವಮಾನವತ್ವದ ಗುರಿಯಾಗಿರುತ್ತದೆ ಇಂದಿನ ಜಗತ್ತಿನಲ್ಲಿ ಇಂತಹ ವಿಶ್ವಮಾನವತ್ವದ ಸ್ವರೂಪವನ್ನು ಪ್ರಪಂಚದ ಎಲ್ಲ ದೇಶಗಳೂ ಸಮಸ್ತ ಮಾನವಕೋಟಿ ಅರ್ಥಮಾಡಿಕೊಂಡು, ಉತ್ತಮ ಜೀವನ ನಡೆಸಬೇಕು ಪರಸ್ಪರರ ಹೊಂದಾಣಿಕೆ ಇರಬೇಕು ಸಹಜೀವನ, ಸಹಬಾಳ್ವೆ - ಎಲ್ಲರ ಗುರಿಯಾಗಬೇಕು ಇದೇ ಧರ್ಮದ ನಿಜವಾದ ಸ್ವರೂಪವಾಗಿರುತ್ತದೆ ಪ್ರಪಂಚದ ಎಲ್ಲ ಸಂತರೂ ಇದೇ ಮಾತನ್ನೇ ಹೇಳಿರುತ್ತಾರೆ

# ಶಾಸನಾಸಕ್ತರಿಗೆ ಸುವರ್ಣಾವಕಾಶ







ತಿರುಮಲೆ - ತಿರುಪತಿ ದೇವಸ್ಥಾನಗಳ ಇತಿಹಾಸವನ್ನು ಗುರುತಿಸುವ ತನ್ಮೂಲಕವಾದ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ, ವಾತಾವರಣದ ಪರಿಚಯ ಪಡೆಯಲು ಅನುಕೂಲವಾಗುವ ತಿರುಮಲೆ - ತಿರುಪತಿ ದೇವಸ್ಥಾನಗಳ ಶಾಸನ ಸಂಪುಟಗಳು ಪುನರ್ಮುದ್ರಿತವಾಗಿ ಪ್ರಕಟವಾಗಿವೆ. ಇವುಗಳು ಆರು ಸಂಪುಟಗಳಲ್ಲಿದ್ದು ಏಳನೆಯ ಸಂಪುಟ ಶಾಸನನಾಮ ಸೂಚಿಯಾಗಿದ್ದು ಜೊತೆಗೇ ಒಂದು ರಿಪೋರ್ಟ್ ಸಂಪುಟ ಸಹ ಸೇರಿದೆ. ತಿ. ತಿ. ದೇವಸ್ಥಾನಗಳ ಅಂದಿನ ಶಾಸನ ತಜ್ಞಖ್ಯಾತ ವಿದ್ವಾಂಸ ಸಾಧು ಸುಬ್ರಹ್ಮಣ್ಯಶಾಸ್ತ್ರಿಗಳಿಂದ ಸಂಕಲನಗೊಂಡಿರುವ ಆಂಗ್ಲಭಾಷೆಯ ವಿವರಣೆಯಿರುವ ಈ ಶಾಸನ ಸಂಪುಟಗಳ ವಿವರ ಹೀಗೆ -

1. ಎಪಿಗ್ರಾಫಿಕಲ್ ರಿಪೋರ್ಟ್ (ತಿ.ತಿ.ದೇ. ಶಾಸನಗಳ ಬಗ್ಗೆ)
   ಸಾಧು ಸುಬ್ರಹ್ಮಣ್ಯಶಾಸ್ತ್ರೀ. ರೂ 145-00
   (ಸಾವಿರಕ್ಕೂ ಹೆಚ್ಚಿನ ಶಾಸನಗಳ ಸ್ಥೂಲ ಚಿತ್ರಣ, ವಿವರಣೆ)
2. ಅರ್ಲಿ ಇನ್ಸ್‌ಕ್ರಿಪ್ಷನ್ಸ್ (1)
   ಸಂಪಾದನೆ - ಅನುವಾದ : ಸಾಧುಸುಬ್ರಹ್ಮಣ್ಯಶಾಸ್ತ್ರೀ.
   (236 ಪ್ರಾಚೀನ ಕಾಲದ ಶಾಸನಗಳ ಬಗ್ಗೆ ಮೂಲ, ಅನುವಾದ ವಿವರಣೆಗಳನ್ನು ಹೊಂದಿದೆ.)
   ರೂ. 100-00
3. ಇನ್ಸ್‌ಕ್ರಿಪ್ಷನ್ಸ್ ಆಫ್ ಸಾಳುವ ನರಸಿಂಹಾಸ್ ಟೈಮ್ (2)
   (1445 ರಿಂದ 1504)
   (356 ಶಾಸನಗಳು - ಸಾಳುವ ನರಸಿಂಹನ ಕಾಲದವು)
   ಅನುವಾದ - ಸಾಧು ಸುಬ್ರಹ್ಮಣ್ಯಶಾಸ್ತ್ರೀ ರೂ. 120-00
   ಸಂಪಾದನೆ - ವಿ. ವಿಜಯರಾಘವಾಚಾರ್ಯ
4. ಇನ್ಸ್‌ಕ್ರಿಪ್ಷನ್ಸ್ ಆಫ್ ಕೃಷ್ಣರಾಯಾಸ್ ಟೈಮ್ (3)
   (1509 ರಿಂದ 1531)
   (400 ಶಾಸನಗಳು - ಶ್ರೀಕೃಷ್ಣದೇವರಾಯನ ಕಾಲದವು)
   ಅನುವಾದ - ಸಂಪಾದನೆ - ವಿ ವಿಜಯರಾಘವಾಚಾರ್ಯ
   ರೂ. 125-00
5. ಇನ್ಸ್‌ಕ್ರಿಪ್ಷನ್ಸ್ ಆಫ್ ಅಚ್ಯುತರಾಯಾಸ್ ಟೈಮ್ (4)
   (1530 ರಿಂದ 1542)
   (ಅಚ್ಯುತರಾಯನ ಕಾಲದ 373 ಶಾಸನಗಳ ವಿವರವಿದೆ)
   ಅನುವಾದ - ಸಂಪಾದನೆ - ವಿ ವಿಜಯರಾಘವಾಚಾರ್ಯ.
   ರೂ. 130-00
6. ಇನ್ಸ್‌ಕ್ರಿಪ್ಷನ್ಸ್ ಆಫ್ ಸದಾಶಿವರಾಯಾಸ್ ಟೈಮ್ (5)
   (1541 ರಿಂದ 1574)
   (ಸದಾಶಿವರಾಯನ ಕಾಲದ 473 ಶಾಸನಗಳ ವಿವರವಿದೆ.)
   ಅನುವಾದ - ಸಂಪಾದನೆ - ವಿ ವಿಜಯರಾಘವಾಚಾರ್ಯ
   ರೂ. 150-00
7. ಇನ್ಸ್‌ಕ್ರಿಪ್ಷನ್ಸ್ ಆಫ್ ವೆಂಕಟಪತಿರಾಯಾಸ್ ಟೈಮ್ (6)
   (1561 ರಿಂದ ವೆಂಕಟಪತಿರಾಯನ ಕಾಲದ ಹಾಗೂ ನಂತರದ 252 ಶಾಸನಗಳ ವಿವರವಿದೆ.)
   ಅನುವಾದ - ಸಂಪಾದನೆ - ವಿ. ವಿಜಯರಾಘವಾಚಾರ್ಯ.
   ರೂ 100-00
8. ಎಪಿಗ್ರಾಫಿಕಲ್ ಗ್ಲಾಸೊರಿ ಆನ್ ಟಿ.ಟಿ.ಡಿ. ಇನ್ಸ್‌ಕ್ರಿಪ್ಷನ್ಸ್ (7)
   (ಕ್ರಿ.ಶ 830 ದಿಂದ 1690 ವರೆಗಿನ ಶಾಸನ ಸೂಚಿ, ವಂಶವೃಕ್ಷಗಳೊಡನೆ)
   ಸಂಕಲನ - ಸಂಪಾದನೆ - ವಿ ವಿಜಯರಾಘವಾಚಾರ್ಯ
   ರೂ 120-00
9. ತಿರುಪತಿ ವೆಂಕಟೇಶ್ವರ - ಸಾಧುಸುಬ್ರಹ್ಮಣ್ಯಶಾಸ್ತ್ರೀ
   (ಶಾಸನಾಧಾರದಲ್ಲಿ ಆಲಯ ಚರಿತ್ರೆಯ ವಿವರ)
   ರೂ. 100-00

ಎಲ್ಲ ಪುಸ್ತಕಗಳೂ ಮೂಲ ಶಾಸನ ಭಾಷೆಯೊಡನೆ ಆಂಗ್ಲ ವಿವರಣೆ ಹೊಂದಿರತಕ್ಕವು. ಎಲ್ಲ ಪ್ರತಿಗಳೂ ಉತ್ತಮ ಕ್ಯಾಲಿಕೋ ಪ್ರತಿಗಳೇ. ಎಲ್ಲ ಪುಸ್ತಕಗಳ ಒಂದೊಂದು ಪ್ರತಿ ಕೊಂಡವರಿಗೆ 30 ಶತಾಂಶ ರಿಯಾಯಿತಿ ಉಂಟು ನಮ್ಮ ಪುಸ್ತಕ ಪ್ರದರ್ಶನ ಮಾರಾಟ ಶಾಲೆಗಳಲ್ಲಿ 25 ಶತಾಂಶ ರಿಯಾಯಿತಿ ಇದೆ ಅಂಚೆವೆಚ್ಚ ಪ್ರತ್ಯೇಕ. ವಿ ಪಿ ಪಿ ಇಲ್ಲ ಡಿ ಡಿ ಗಳನ್ನು ಮಾತ್ರ ಸ್ವೀಕರಿಸಲಾಗುವುದು

ಕೂಡಲೇ ಬರೆಯಿರಿ.

**ಪೌರಸಂಬಂಧಾಧಿಕಾರಿ,**
ತಿ ತಿ.ದೇ ಗ್ರಂಥ ಮಾರಾಟ ವಿಭಾಗ,
ತಿ.ತಿ.ದೇ., ತಿರುಪತಿ - 517 507.

# ವಾರ್ತಾಲಹರಿ

## ಸ್ವಾಮಿಗೆ 57 ಕಿಲೋಗ್ರಾಂ ತೂಕದ ಲಾಡು

1999 ರ ಜನವರಿ 1 ರಂದು ಗ್ರಿಗೋರಿಯನ್ ಪಂಚಾಂಗದಂತೆ ಹೊಸ ವರ್ಷದ ಮೊದಲದಿನ ದಂದು ತಿರುಮಲೆಯಲ್ಲಿ ಸ್ವಾಮಿಗೆ ನಿವೇದನೆಗೆಂದು ಸ್ವಾಮಿಯ ಅಡುಗೆಯ ಮನೆ (ಪೋಟು) ಕಾರ್ಮಿಕರು 57 ಕಿಲೋಗ್ರಾಂ ತೂಕದ ಭಾರಿ ಲಾಡುವನ್ನು ತಯಾರುಮಾಡಿದರು ಭಾರೀ ಪ್ರಮಾಣದ ಈ ಲಾಡುವನ್ನು ಸ್ವಾಮಿಗೆ ನಿವೇದಿಸಿದ ನಂತರ ಪ್ರಸಾದವಾಗಿ ಭಕ್ತರಿಗೆ ಹಂಚಲಾಯಿತು

ಹೊಸ ಸಂವತ್ಸರದಾದಿಯ ವಿಶೇಷ ಸಂದರ್ಭದಲ್ಲಿ ಸ್ವಾಮಿಗೆ ಹೆಚ್ಚಿನ ಅಲಂಕಾರವನ್ನು ಮಾಡಲಾಗಿದ್ದಿತು ವಜ್ರಕಿರೀಟ, ವಜ್ರಖಚಿತವಾದ ಶಂಖ, ಚಕ್ರಗಳು ಸೂರ್ಯ ಕಠಾರಿ - ಮತ್ತಿತರ ಆಭರಣಗಳನ್ನೂ ಸ್ವಾಮಿಗೆ ತೊಡಿಸಲಾಗಿದ್ದಿತು

ಹೊಸ ವರ್ಷದಾದಿಯ ಸಂದರ್ಭದಲ್ಲಿ ಸ್ವಾಮಿ ದರ್ಶನಕ್ಕೆಂದು ತಿರುಮಲೆಗೆ ಆಗಮಿಸಿದ ಯಾತ್ರಿಕ ಬಂಧುಗಳಿಗೆ ಉಚಿತವಾಗಿ ಟೀಯನ್ನು ಡಿಸೆಂಬರ್ 31 ಹಾಗೂ ಜನವರಿ 1 ರಂದು ನೀಡಲಾಯಿತು ಸುಮಾರು ಎರಡು ಲಕ್ಷ ಮಂದಿಗೆ ಟೀಯನ್ನು ಉಚಿತವಾಗಿ ನೀಡಲಾಯಿತೆಂದು ಟಾಟಾ ಟೀಯವರ ಸ್ಥಳೀಯ ಶಾಖೆಯ ಅಧ್ಯಕ್ಷರಾದ ಶ್ರೀ ವೇದವ್ಯಾಸ ಅವರು ತಿಳಿಸಿದ್ದಾರೆ

## ದಿನವಿಡೀ ಸ್ವಾಮಿಯ ನಾಮ ಜಪ

ತಿರುಪತಿಯ ಶ್ರೀ ವೆಂಕಟೇಶ್ವರ ವಿಶ್ವವಿದ್ಯಾನಿಲಯದಲ್ಲಿನ ಆಡಳಿತ ವಿಭಾಗದಲ್ಲಿ ಅಧೀಕ್ಷಕರಾಗಿ ಕೆಲಸ ಮಾಡುತ್ತಿರುವ ಶ್ರೀ ಎಸ್ ವಿ ಎಸ್ ತ್ಯಾಗರಾಜನ್ ಅವರು 24 ಗಂಟೆಗಳ ಕಾಲ ನಿರ್ವಿರಾಮವಾಗಿ ಸ್ವಾಮಿಯ ನಾಮಜಪ ಮಾಡಿದರು ಕ್ರಿಸ್ತ ವರ್ಷದ ಮೊದಲದಿನ ದೈವಚಿಂತನೆಯನ್ನು ಹೊಸರೂಪದಲ್ಲಿ ಮಾಡುವ ಶ್ರೀಯುತರು 1999 ರ ಪ್ರಾರಂಭದ ಮೊದಲದಿನ 'ಓಂ ನಮೋ ವೆಂಕಟೇಶಾಯ' ಎಂಬ ಮಂತ್ರವನ್ನು - ಸ್ವಾಮಿಯ ಹೆಸರನ್ನು - 24 ಗಂಟೆಗಳ ಕಾಲ ಅವಿರತವಾಗಿ ಹೇಳುವುದರಲ್ಲಿ ಕಳೆದರು



## ಶ್ರೀ ಗೋವಿಂದರಾಜಸ್ವಾಮಿ ತೆಪ್ಪೋತ್ಸವ

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಪುಷ್ಕರಿಣಿಯಲ್ಲಿ ವಾರ್ಷಿಕ ತೆಪ್ಪೋತ್ಸವಗಳು ವೈಭವದಿಂದ ನಡೆದವು. ಐದುದಿನಗಳ ಕಾಲ ಮಾಘಮಾಸದ ಪೂರ್ಣಿಮೆಯ ಕೇಂದ್ರದ ಸುತ್ತ ನಡೆದ ಪ್ಲವೋತ್ಸವಗಳಲ್ಲಿ ಜನವರಿ 27 ರಂದು ಬುಧವಾರ ಶ್ರೀ ಕೋದಂಡರಾಮಸ್ವಾಮಿಗೂ 28 ರ ಜನವರಿ - ಗುರುವಾರದಂದು ಶ್ರೀಕೃಷ್ಣ ಗೋದಾದೇವಿಯವರಿಗೂ, ನಂತರದ ಮೂರು ದಿನವೂ ಶ್ರೀ ಗೋವಿಂದರಾಜಸ್ವಾಮಿ ಅವರಿಗೂ ಪುಷ್ಕರಿಣಿಯ ವರ್ಣಮಯವಿದ್ಯುದ್ದೀಪಕಾಂತಿಪ್ರತಿಫಲನದ ಇಂದ್ರಧನುಸ್ಸಿನ ಜಲಧಿಯಲ್ಲಿ ತೆಪ್ಪೋತ್ಸವಗಳು ವೇದಘೋಷ ಮಂಗಳ ವಾದ್ಯ ಘೋಷಗಳ ನಡುವೆ ಯಶಸ್ವಿಯಾಗಿ ನಡೆದವು

ತದಂಗವಾಗಿ ಪ್ರಾತಃಕಾಲಗಳಲ್ಲಿ ತಿರುಮಂಜನ, ನಡೆದು ಅಮ್ಮನವರಿಗೆ ಹರಿದ್ರಾ ಕುಂಕುಮ ತುಲಸೀ ಮಾಲೆ ಸಮರ್ಪಣೆಗಳೂ ಅಲಂಕಾರಗಳೂ ನಡೆದವು. ನಾಲ್ಕು ಮಾಡವೀಧಿಗಳಲ್ಲಿ ಮೆರವಣಿಗೆ ನಡೆದವು. ದಿನವೂ ಸಂಜೆ ಅಲಂಕಾರಗೊಂಡ ದಾರಿಯಲ್ಲಿ ಹರ್ಷಧ್ವಾನಗಳ ನಡುವೆ ಪುಷ್ಕರಿಣಿಗೆ ಮೆರವಣಿಗೆ ಮಂಗಳವಾದ್ಯಗಳೊಡನೆ ಆಗಮಿಸಿದ ನಂತರ ಕಣ್ಣಿಗೆ ಹಬ್ಬವಾದ ತೆಪ್ಪೋತ್ಸವಗಳು ನಡೆದವು.





## ತಿರುಮಲೆಯಲ್ಲಿ ಸೋನಿಯಾಗಾಂಧಿ

ಅಖಿಲಭಾರತ ಕಾಂಗ್ರಸ್ ಅದ್ಯಕ್ಷರೂ, ಕಾಂಗ್ರೆಸ್ ಪಾರ್ಲಿಮಂಟರಿ ಪಕ್ಷದ ನಾಯಕರೂ ಆದ ಶ್ರೀಮತಿ ಸೋನಿಯಾಗಾಂಧಿ ಜನವರಿ 28 ರಂದು ಗುರುವಾರ ತಿರುಮಲೆಯಲ್ಲಿ ಸ್ವಾಮಿಯನ್ನು ಸಂದರ್ಶಿಸಿದರು

ಶ್ರೀಮತಿ ಸೋನಿಯಾಗಾಂಧಿಯವರಿಗೆ ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಡಾ|| ಐ ವಿ ಸುಬ್ಬಾರಾವ್ಪು ಸಂಯುಕ್ತ ಕಾರ್ಯನಿರ್ವಹಣಾದಿಕಾರಿ ಶ್ರೀ ಬಾಲ ಸುಬ್ರಹ್ಮಣ್ಯಂ, ಮುಖ್ಯ ರಕ್ಷಣಾದಿಕಾರಿ ಶ್ರೀ ವಿಜಯ ಕುಮಾರ್ ಮತ್ತಿತರರು ಸ್ವಾಗತವನ್ನು ಸೂಚಿಸಿದರು ಶ್ರೀಮತಿ ಸೋನಿಯಾಗಾಂಧಿಯವರ ಜೊತಯಲ್ಲಿ ಅವರ ಪುತ್ರಿ ಶ್ರೀಮತಿ ಪ್ರಿಯಾಂಕ ಗಾಂಧಿ, ಆಂಧ್ರಪ್ರದೇಶದ ಮಾಜಿ ಮುಖ್ಯಮಂತ್ರಿಗಳು ಇತರ ಅಧಿಕಾರಿಗಳು ಇದ್ದರು

ಅವರಿಗೆ ಸ್ವಾಮಿಯವರ ಪ್ರಸಾದಗಳ್ನು ನೀಡಲಾಯಿತು

ಹಿಂದಿನ ದಿನ ಸಂಜೆ ಶ್ರೀಮತಿಯವರು ತಿ ತಿ ದೇ ನಿರ್ವಹಣೆಯ ಬರ್ಡ್ ಆಸ್ಪತ್ರೆಯನ್ನು (ವಿಕಲಾಂಗ ಚಿಕಿತ್ಸಾ ಆಸ್ಪತ್ರೆ) ದರ್ಶಿಸಿ ಅಲ್ಲಿನ ಮಾನವೋಪಯೋಗಿ ಕ್ರಮಗಳನ್ನು ವೀಕ್ಷಿಸಿದರು ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಡಾ|| ಐ ವಿ ಸುಬ್ಬಾರಾವು ಮತ್ತಿತರ ಅಧಿಕಾರಿಗಳು ಅವರನ್ನು ಸ್ವಾಗತಿ

ಿಸಿದರು ಆಸ್ಪತ್ರೆಯ ನಿರ್ದೇಶಕ ವೈದ್ಯರಾದ ಡಾ|| ಜಗದೀಶ್ ಅವರು ಶ್ರೀಮತಿಯವರಿಗೆ ವಿಕಲಾಂಗ ಚಿಕಿತ್ಸೆಯ ಬಗ್ಗೆಯೂ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯು ತ್ತಿರುವವರ ಬಗ್ಗೆಯೂ ಮಾಹಿತಿಯನ್ನು ನೀಡಿದರು

ಶ್ರೀಮತಿ ಸೋನಿಯಾಗಾಂಧಿ ಅವರು ತಮ್ಮ ಪುತ್ರಿಯೊಂದಿಗೆ ತಿರುಚಾನೂರಿನ ಶ್ರೀ ಪದ್ಮಾವತೀ ಅಮ್ಮನವರನ್ನೂ ದರ್ಶಿಸಿದರು

## ತಿರುಪ್ಪಾವೈ ತೆಲುಗು ಧ್ವನಿಸುರುಳಿ

ತಿರುಪ್ಪಾವೈ ಪಾಶುರಗಳ ತೆಲುಗು ಅವತರಣಿಕೆಯ ಧ್ವನಿಸುರುಳಿಯನ್ನು ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಡಾ|| ಐ ವಿ ಸುಬ್ಬರಾವು ಅವರು ಜನವರಿ 10 ರಂದು ತಿರುಪತಿಯ ತ್ಯಾಗರಾಜ ಮಂಟಪದಲ್ಲಿ ನಡೆದ ಸರಳ ಸಮಾರಂಭದಲ್ಲಿ ಬಿಡುಗಡೆ ಮಾಡಿದರು ಶ್ರೀಮತಿ ತೆಲಿಕಚೆರ್ಲ ಕಂದಾಡೈ ಸೀತಮ್ಮನವರು ತಿರುಪ್ಪಾವೈ ಪಾಶುರಗಳನ್ನು ತೆಲುಗಿಗೆ ಅನುವಾದಿಸಿ ಧ್ವನಿ ಸುರುಳಿಯನ್ನಾಗಿಸಿದ್ದಾರೆ

ಭಕ್ತಿ ಪ್ರಸಾರದಲ್ಲಿ ಪ್ರತಿಯೊಬ್ಬರೂ ಚಿತ್ತಶುದ್ಧಿಯಿಂದ ಪ್ರಚಾರ ಮಾಡಬೇಕೆಂಬುದಾಗಿ ಕಾರ್ಯನಿರ್ವಹಣಾಧಿಕಾರಿಗಳು ತತ್ಸಂದರ್ಭದಲ್ಲಿ ಕರೆನೀಡಿದರು ಈ ಕಾರ್ಯಕ್ರಮದಲ್ಲಿ ಧರ್ಮಪ್ರಚಾರ ಪರಿಷತ್ ಕಾರ್ಯದರ್ಶಿ ಶ್ರೀ ಸಮುದ್ರಾಲ ಲಕ್ಷ್ಮಣಯ್ಯ ಅನ್ನಮಾಚಾರ್ಯ ಪ್ರಾಜೆಕ್ಟ್ ನಿರ್ದೇಶಕರು ಡಾ|| ಮೇಡಸಾನಿ ಮೋಹನ್, ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದಿನ ಚೀಫ್ ಮ್ಯಾನೇಜರ್ ಶ್ರೀ ಪೂರ್ಣಚಂದ್ರರಾವು ಜನರಲ್ ಮ್ಯೇನೇಜರ್ ಶ್ರೀ ಕೆ ಎಸ್ ಮೂರ್ತಿ, ಪೌರಸಂಬಂದಾಧಿಕಾರಿ ಶ್ರೀ ಸುಭಾಷ್ ಗೌಡ್ ಅವರುಗಳು ಪಾಲುಗೊಂಡಿದ್ದರು

## ಟಿ.ಟಿ.ಡಿ. ಎಸ್ಟೇಟ್ ಆಫೀಸರ್

ತಿರುಮಲ ತಿರುಪತಿ ದೇವಸ್ಥಾನಗಳ ಆಸ್ತಿ ಪಾಸ್ತಿಗಳ ಅಧಿಕಾರಿಯಾಗಿ ಶ್ರೀ ಕೆ ಮಾರನ್ನ ಜನವರಿ 20 ರಂದು ಬುದವಾರ ಪದವಿ ಬಾಧ್ಯತೆಗಳನ್ನು ಸ್ವೀಕರಿಸಿದ್ದಾರೆ ಇದುವರೆಗೆ ಶ್ರೀಯುತರು ಸತ್ಯಸಾಯಿ ವಾಟರ್ ವರ್ಕ್ಸ್ ಸ್ಕೀಂನಲ್ಲಿ ಡೆಪ್ಯೂಟಿ ಕಲೆಕ್ಟರ್ ಹುದ್ದೆಯಲ್ಲಿದ್ದು, ಬದಲಿಯ ಮೇರೆಗೆ ತಿ ತಿ ದೇ ಆಸ್ತಿಪಾಸ್ತಿಗಳನ್ನು ಕಾಪಾಡುವ ಅಧಿಕಾರಿಯಾಗಿರುತ್ತಾರೆ

## ತಿರುಮಲೆಯಲ್ಲಿ ರಥಸಪ್ತಮಿ

ತಿರುಮಲಯ ಶ್ರೀ ವೆಂಕಟೇಶ್ವರಸ್ವಾಮಿ ಆಲಯದಲ್ಲಿ ಜನವರಿ 24 ರಂದು ವೈಭವದಿಂದ ರದಸಪ್ತಮಿ ಉತ್ಸವಗಳು ನಡೆದು ಸಂಪನ್ನವಾದವು. ತತ್ಸಂದರ್ಭದಲ್ಲಿ ಸ್ವಾಮಿಗೆ ಸಪ್ತವಾಹನ ಉತ್ಸವ ಅಂದು ಬೆಳಗ್ಗೆ ಸೂರ್ಯ ಹುಟ್ಟುತ್ತಿದ್ದಂತೆಯೇ ಸೂರ್ಯಪ್ರಭವಾಹನದಿಂದ ಆರಂಭವಾಯಿತು ನಂತರ ಶೇಷ, ಗರುಡವಾಹನ ಕಲ್ಪವೃಕ್ಷ ವಾಹನಗಳು ನಡೆದು ಅವಭೃಥವಾಯಿತು ನಂತರ ಹನುಮಂತವಾಹನ, ಗಜವಾಹನ ಸೇವೆಗಳು ನಡೆದವು. ಚಂದ್ರಪ್ರಭ ವಾಹನದಿಂದ ಈ ರಥಸಪ್ತಮಿ ಉತ್ಸವಗಳು ಮುಗಿದವು.

ಈ ಉತ್ಸವಗಳಲ್ಲಿ ಲಕ್ಷಾಂತರ ಮಂದಿ ಭಕ್ತರು ಭಾಗವಹಿಸಿ ವಿವಿಧ ವಾಹನಗಳನ್ನು ಸ್ವಾಗತಿಸಿದರು ಅಂದು ಬೆಳಗ್ಗೆ ಸೂರ್ಯನ ಕಿರಣಗಳು ಸೂರ್ಯಪ್ರಭವಾಹನದಲ್ಲಿ ಅಲಂಕೃತನಾದ ಸ್ವಾಮಿಯನ್ನು ಸೋಕಿದಾಗಿನಿಂದ ಪ್ರಾರಂಭವಾದ ಮೆರವಣಿಗೆಗಳು, ಚಂದ್ರನ ಕಿರಣಗಳು ಚಂದ್ರಪ್ರಭವಾಹನದಲ್ಲಿದ್ದ ಸ್ವಾಮಿಯನ್ನು ತಾಕಿ ಪೂಜಿಸುವಂತಿದ್ದಾಗ ಮುಗಿದವು. ಈ ಸಂದರ್ಭದಲ್ಲಿ ನೂತನವಾಗಿ ತಯಾರಿಸಿದ ಬಂಗಾರದ ಶೇಷವಾಹನವನ್ನು ಬಳಸಲಾಯಿತು

## ಸ್ವಾಮಿಗೆ ಹೊಸ ಸುವರ್ಣಶೇಷವಾಹನ

ತಿರುಮಲೆಯಲ್ಲಿ ಸ್ವಾಮಿಯ ಉತ್ಸವಗಳಲ್ಲಿ ಬಳಸಲೆಂದು 17 ಲಕ್ಷ 60 ಸಾವಿರ ರೂಪಾಯಿಗಳ ವೆಚ್ಚದಲ್ಲಿ ತಯಾರಿಸಲಾದ ದೊಡ್ಡಶೇಷವಾಹನ ಜನವರಿ 23 ರಂದು ತಿರುಮಲೆಯನ್ನು ಸೇರಿತು ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ಆಲಯದ ಆಭರಣಗಳ ವಿಭಾಗದಲ್ಲಿ ಇದನ್ನು ತಯಾರಿಸಿದರು

ಈ ವಾಹನದ ತಯಾರಿಕೆಯಲ್ಲಿ 4 ಕಿಲೋ ಗ್ರಾಂ ಬಂಗಾರವನ್ನೂ 108 ಕಿಲೋಗ್ರಾಂ ತಾಮ್ರವನ್ನೂ ವಿನಿಯೋಗಿಸಲಾಗಿದೆ ಈ'ವಾಹನ 8 ಅಡಿ ಎತ್ತರವಿದ್ದು ಸಪ್ತಶಿರಗಳ ನಾಗರಾಜನ ಎಡಬಲಗಳಲ್ಲಿ ಶಂಖ ಚಕ್ರಗಳೂ, ಪೀಠದ ಬಳಿ ನಾಗದೇವತೆಯ ದಿಂಡುರುಳಿದ ರೂಪವೂ ಇದೆ

## ಧರ್ಮಕರ್ತರ ಮಂಡಳಿಯ ತೀರ್ಮಾನಗಳು

ತಿರುಮಲೆ ತಿರುಪತಿ ದೇವಸ್ಥಾನಗಳ ಧರ್ಮಕರ್ತರ ಮಂಡಳಿಯ ಸಮಾವೇಶ ಜನವರಿ 29,30 ರಂದು ತಿರುಮಲೆಯಲ್ಲಿ ಆಂಧ್ರಪ್ರದೇಶ ಮುಜರಾಯಿ ಇಲಾಖಾ ಕಮಿಷನರ್ ಶ್ರೀ ಎಸ್ ಎಂ ಬಾಲಸುಬ್ರಹ್ಮಣ್ಯಂ ಅವರ ಅಧ್ಯಕ್ಷತೆಯಲ್ಲಿ ನಡೆಯಿತು ಅಲ್ಲಿ ನಡೆದ ತೀರ್ಮಾನಗಳೆಂದರೆ-

* ಶ್ರೀ ಪದ್ಮಾವತೀ ಅತಿಥಿ ಗೃಹ ಪ್ರಾಂತ್ಯದಲ್ಲಿನ ಗಣ್ಯವ್ಯಕ್ತಿಗಳ, ಅತಿಗಣ್ಯವ್ಯಕ್ತಿಗಳ ವಸತಿ ಗೃಹಗಳ ಬಾಡಿಗೆಯನ್ನು ಹೆಚ್ಚುಗೊಳಿಸಲು ತೀರ್ಮಾನಿಸಲಾಯಿತು

* ವಿಶೇಷ ದರ್ಜೆಯ ಕಾಟೇಜುಗಳ ಬಾಡಿಗೆಯನ್ನು ಹೆಚ್ಚಿಸಲು ತೀರ್ಮಾನಿಸಲಾಯಿತು

* ಸ್ವಾಮಿಯ ದರ್ಶನಕ್ಕಾಗಿ ಸರತಿಯ ಸಾಲಿನಲ್ಲಿ ಆರು ಗಂಟೆಗಿಂತ ಹೆಚ್ಚು ಕಾಯುವ ಸಂದರ್ಭಗಳಲ್ಲಿ ಯಾತ್ರಿಕರಿಗೆ ಉಚಿತವಾದ ಆಹಾರದ ಪೊಟ್ಟಣಗಳನ್ನು ಹಂಚಬೇಕೆಂದು ತೀರ್ಮಾನಿಸಲಾಯಿತು

* ದೇವಾಲಯ ಕಾರ್ಯಕ್ರಮಗಳನ್ನು ಇಂಟರ್‌ನೆಟ್‌ನಲ್ಲಿ ಪ್ರವೇಶಗೊಳಿಸಬೇಕೆಂದು ತೀರ್ಮಾನಿಸಲಾಯಿತು

* ತಿರುಚಾನೂರಿನ ಶ್ರೀ ಪದ್ಮಾವತೀ ಅಮ್ಮನವರ ಆಲಯದಲ್ಲಿ ಭಕ್ತರಲ್ಲಿ ವಿತರಣೆಗೆಂದು, ಹೆಚ್ಚಿನ ನಿವೇದನೆ ಮಾಡಲು ಪ್ರಸಾದಗಳ ದಿಟ್ಟವನ್ನು ಹೆಚ್ಚಿಸಲು ತೀರ್ಮಾನಿಸಿದರು

* ತಿರುಪತಿ - ತಿರುಚಾನೂರು ರಸ್ತೆಯನ್ನು - 37 ಕೋಟಿ ರೂಪಾಯಿಗಳ ವೆಚ್ಚದಲ್ಲಿ ಅಗಲಗೊಳಿಸಬೇಕೆಂದು ತೀರ್ಮಾನಿಸಲಾಯಿತು

* ಕರ್ನಾಟಕದ ಮೇಲುಕೋಟೆ ಸಂಸ್ಕೃತ ವಿದ್ಯಾಪೀಠದಲ್ಲಿ ಉನ್ನತ ವಿದ್ಯಾಭ್ಯಾಸಕ್ಕೆ ಹೋಗುವ ಧರ್ಮಗಿರಿಯ ವೇದಪಾಠಶಾಲೆಯ ವಿದ್ಯಾರ್ಥಿಗಳಿಗೆ ಆರ್ಥಿಕ ಸಹಕಾರ ನೀಡಬೇಕೆಂದು ತೀರ್ಮಾನಿಸಲಾಯಿತು

* ತಿರುಪತಿಯ ಒಂದನೇ ಸತ್ರದ ಸ್ಥಳದಲ್ಲಿ ಸುಮಾರು 20 ಕೋಟಿ ರೂಗಳ ಅಂದಾಜು ವೆಚ್ಚದಲ್ಲಿ ನಾಲ್ಕು ಅಂತಸ್ತುಗಳ ಯಾತ್ರಿಕರ ವಸತಿಗೃಹವನ್ನು ನಿರ್ಮಿಸಲು ತೀರ್ಮಾನಿಸಲಾಯಿತು ಈ ವಸತಿ ಸಮುದಾಯದಲ್ಲಿ 600 ಕೊಠಡಿಗಳು, ಆಸ್ಪತ್ರೆ, ವಾಹನಗಳ ನಿಲುಗಡೆ ಸ್ಥಳ, ಉಪಹಾರ ಗೃಹಗಳಿರುತ್ತವೆ

* ತಿರುಮಲೆಯ ಮೆಟ್ಟಿಲ ಮಾರ್ಗದಲ್ಲಿ ನೆರಳಿಲ್ಲದ ಕಡೆ ನೆರಳನ್ನು ಸುಮಾರು 30 ಲಕ್ಷ ರೂಪಾಯಿಗಳ ವೆಚ್ಚದಲ್ಲಿ ನಿರ್ಮಿಸಲು ತೀರ್ಮಾನಿಸಲಾಯಿತು

* ಹೊಸದೆಹಲಿಯಲ್ಲಿ 4 ಕೋಟಿ ರೂಪಾಯಿಗಳ ಅಂದಾಜು ವೆಚ್ಚದಲ್ಲಿ ಅತ್ಯಾಧುನಿಕವಾದ ದೇವಸ್ಥಾನ ಸಮಾಚಾರ ಕೇಂದ್ರವನ್ನು ನಿರ್ಮಿಸಲು ತೀರ್ಮಾನಿಸಲಾಯಿತು



## ಸಪ್ತಗಿರಿ ಸಂಪಾದಕರಿಗೆ ಡಾಕ್ಟರೇಟ್

ತಿರುಮಲ ತಿರುಪತಿ ದೇವಸ್ಥಾನಗಳ ಐದು ಭಾಷೆಯಲ್ಲಿ ಪ್ರಸಾರವಾಗುವ ಮಾಸಪತ್ರಿಕೆ 'ಸಪ್ತಗಿರಿ' ಸಂಪಾದಕ ಶ್ರೀ ಎಸ್ ಎಸ್. ರಾಮಮೂರ್ತಿ ಅವರಿಗೆ ಇತ್ತೀಚೆಗೆ ಡಾಕ್ಟರೇಟ್ ಹಾಗೂ ಜ್ಞಾನರತ್ನ ಬಿರುದು ನೀಡಲಾಯಿತು

ಇಟಲಿಯ ಡಯಾಂಡ್ರ ವಿಶ್ವವಿದ್ಯಾಲಯದವರು ಶ್ರೀಯುತರಿಗೆ ಡಾಕ್ಟರ್ ಆಫ್ ಫಿಲಾಸಫಿಪಟ್ಟವನ್ನು ನೀಡಿದ್ದಾರೆ

ಚೆನ್ನೈನ ಪಾರ್ಥಸಾರಥಿ ಸಾಂಸ್ಕೃತಿಕ ಸಂಶೋಧನ ಅಕಾಡಮಿಯವರು 'ಜ್ಞಾನ ರತ್ನ' ಬಿರುದನ್ನೂ ನೀಡಿದ್ದಾರೆ ಧಾರ್ಮಿಕ ಪತ್ರಿಕೆಯ ಸಂಪಾದಕ ವರ್ಗದಲ್ಲಿ 25 ವರ್ಷಕ್ಕಿಂತ ಹೆಚ್ಚು ಸೇವೆ ಸಲ್ಲಿಸಿದ್ದಕ್ಕಾಗಿ, ಈ ಬಿರುದನ್ನು ಪ್ರದಾನ ಮಾಡಲಾಗಿದೆ. ಅಕಾಡಮಿಯ ಪರವಾಗಿ ಶ್ರೀ ಪೆರಂಬುದೂರಿನ ಶ್ರೀ ಶ್ರೀ ಯತಿರಾಜ ಜೀಯರ್ ಅವರು 'ಜ್ಞಾನ ರತ್ನ' ಬಿರುದನ್ನು ಚೆನ್ನೈನ ಪಾಂಗ್ರೂವ್ ಹೋಟೆಲಿನಲ್ಲಿ ಜನವರಿ 26 ರಂದು ನಡೆದ ಸರಳ ಸಮಾರಂಭದಲ್ಲಿ ಶ್ರೀ ರಾಮಮೂರ್ತಿ ಅವರಿಗೆ ನೀಡಿದರು

1970 ರಲ್ಲಿ ಆರಂಭವಾದ ಸಪ್ತಗಿರಿ ಮಾಸಪತ್ರಿಕೆಯನ್ನು ಶ್ರೀ ಎಸ್ ಎಸ್ ರಾಮಮೂರ್ತಿ ಅವರು 1972 ರಲ್ಲಿ ಸೇರಿ, 1994 ರಲ್ಲಿ ಅದರ ಎರಡನೆಯ ಸಂಪಾದಕರಾಗಿ ಅಧಿಕಾರವನ್ನು ಸ್ವೀಕರಿಸಿದ್ದಾರೆ

-ಬಿ. ಎಸ್ ಎಸ್

### ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ - ತಿರುಮಲೆ

## ಅಷ್ಟದಳ ಪದ್ಮಾರಾಧನೆ

ತಿರುಮಲೆಯಲ್ಲಿ ಸ್ವಾಮಿಗೆ ಪ್ರತಿಮಂಗಳವಾರವೂ ಎರಡನೇ ಅರ್ಚನೆಯ ಸಮಯದಲ್ಲಿ ಅಷ್ಟೋತ್ತರನಾಮಗಳನ್ನು ಹೊಂದಿದ 108 ಬಂಗಾರದ ಪದ್ಮಪುಷ್ಪಗಳಿಂದ ಆರಾಧನೆ ನಡೆಸಲಾಗುತ್ತದೆ.

ಈ ಅರ್ಚನೆಯ ಸಮಯದಲ್ಲಿ ರೂ. 3,500/- ಶುಲ್ಕದಿಂದ ಗೃಹಸ್ಥರು ಪಾಲುಗೊಳ್ಳಬಹುದು ಅವರೊಂದಿಗೆ ಅವರ ಕಡೆಯ ಐದು ಮಂದಿ ಈ ಆರಾಧನೆಗೆ ಅನುಮತಿಸಲ್ಪಡುತ್ತಾರೆ.

ಈ ಸೇವೆಯನ್ನು ಮಾಡಿಸುವ ಗೃಹಸ್ಥರಿಗೆ ಒಂದು ಶೇಷವಸ್ತ್ರ ಒಂದು ಕುಪ್ಪಸದ ಕಣ, ಹತ್ತು ದೊಡ್ಡ ಲಾಡು, ಹತ್ತು ವಡೆಗಳನ್ನು ಪ್ರಸಾದವಾಗಿ ನೀಡಲಾಗುವುದು

ಭಕ್ತರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ವಿನಂತಿ ಮಾಡಲಾಗಿದೆ

ತಿ. ತಿ. ದೇವಸ್ಥಾನಗಳು.

* ತಿರುಪತಿಯ ಆಯುರ್ವೇದ ಕಲಾಶಾಲೆಯ ಎದುರಿಗೆ 75 ಲಕ್ಷ ರೂಪಾಯಿಗಳ ಅಂದಾಜು ವೆಚ್ಚದಲ್ಲಿ ಆಯುರ್ವೇದ ಆಸ್ಪತ್ರೆಯನ್ನು ನಿರ್ಮಿಸಲು ತೀರ್ಮಾನಿಸಲಾಯಿತು

## ಜಯ ವಿಜಯ ವಿಗ್ರಹ ಪ್ರತಿಷ್ಠಾಪನೆ

ತಿರುಪತಿಯ ಸಮೀಪದ ಶ್ರೀನಿವಾಸ ಮಂಗಾಪುರದ ಶ್ರೀ ಕಲ್ಯಾಣವೆಂಕಟೇಶ್ವರಸ್ವಾಮಿ ಆಲಯದಲ್ಲಿ ಜನವರಿ 31 ರ ಭಾನುವಾರ ಜಯ ವಿಜಯರ ವಿಗ್ರಹಗಳ ಪ್ರತಿಷ್ಠಾಪನೆ ನಡೆಯಿತು ಮೂರು ದಿನಗಳ ಅಂಕುರಾರ್ಪಣ ಯಾಗವನ್ನು ಪೂರ್ಣಗೊಳಿಸಿ, ಆಗಮ ಶಾಸ್ತ್ರ ಪ್ರಕಾರ ಹೋಮ, ಕಲಶಸ್ಥಾಪನೆ, ವಿಷ್ವಕ್ಸೇನ ಆರಾಧನೆ, ನವಕುಂಭಾರೋಹಣ, ಪೂರ್ಣಾಹುತಿ - ಮೊದಲಾದ ಕಾರ್ಯಕ್ರಮಗಳಾದ ಮೇಲೆ, ಭಾನುವಾರದಂದು ಆವಾಹನೆ, ಬ್ರಹ್ಮಘೋಷ, ಆಶೀರ್ವಾದ - ಮೊದಲಾದ ಕಾರ್ಯಗಳನ್ನು ನಿರ್ವಹಿಸಲಾಯಿತು ಅನಂತರ ವಿಗ್ರಹಗಳ ಪ್ರತಿಷ್ಠಾಪನೆಯಾಯಿತು

## ಅತ್ಯಂತ ಅಧಿಕ ಆದಾಯ

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ಆಲಯದಲ್ಲಿ ದಾಖಲೆಯ ಸ್ತರದಲ್ಲಿ ಅತ್ಯಧಿಕ ಹುಂಡಿ ಆದಾಯವನ್ನು ಗುರುತಿಸಲಾಗಿದೆ ಫೆಬ್ರವರಿ 1 ರಂದು ಸೋಮವಾರ ಒಂದು ದಿನದಲ್ಲಿಯೇ ಸ್ವಾಮಿಗೆ ಒಂದು ಕೋಟಿ ಮೂವತ್ತೈದು ಲಕ್ಷ ರೂಪಾಯಿಗಳ ಆದಾಯವಾಗಿರುವುದನ್ನು ಅಧಿಕಾರಿಗಳು ಗುರುತಿಸಿದ್ದಾರೆ

ಅಂದು ಸ್ವಾಮಿಗೆ ಒಬ್ಬ ಭಕ್ತರೇ ಐವತ್ತೈದು ಲಕ್ಷ ರೂಗಳನ್ನು ಸಮರ್ಪಿಸಿದ್ದರು ಒಂದೇ ಬಂಡಲಿನಲ್ಲಿದ್ದ ಈ ಮೊತ್ತವನ್ನು ಒಬ್ಬರೇ ಅಜ್ಞಾತಭಕ್ತರು ಹುಂಡಿಗೆ ಸೇರಿಸಿರಬೇಕೆಂದು ನಂಬಲಾಗಿದೆ. ಮತ್ತೊಬ್ಬ ಅಜ್ಞಾತ ಭಕ್ತರು ಒಂದು ಕಿಲೋಗ್ರಾಂ ತೂಕದ ಬಂಗಾರದ ಕಡ್ಡಿಯನ್ನು ಹುಂಡಿಯಲ್ಲಿ ಸಮರ್ಪಿಸಿದ್ದಾರೆ

## ಸ್ವಾಮಿಗೆ ಇಂಡಿಕಾ ಕಾಣಿಕೆ

ತಿರುಮಲೆಯ ಸ್ವಾಮಿಯ ಸೇವೆಯಲ್ಲಿ ಹೈದರಾಬಾದಿನ ಜಾಫರ್ ಇಂಡಸ್ಟ್ರೀಸ್ ಪರವಾಗಿ ಶ್ರೀ ಪಿ ರಾಮಕೃಷ್ಣ ಇತ್ತೀಚೆಗೆ ಇಂಡಿಕಾ ಕಾರ್ ಅನ್ನು ಸಮರ್ಪಿಸಿದ್ದಾರೆ ಅವರು ಈ ಕಾರನ್ನು ಕಾರ್ಯನಿರ್ವಹಣಾಧಿಕಾರಿ ಡಾ || ಐ ವಿ ಸುಬ್ಬರಾವು ಅವರಿಗೆ ನೀಡಿದ್ದಾರೆ

* * *

Edited and Published on behalf of TT Devasthanams by Dr N S Rama Murthy, and Printed at TTD Press
by M Lakshmana Rao, B A., LPT, Manager, TTD Press, Tirupati - 517 507

# ತಿರುಮಲೆಯಲ್ಲಿನ ಸೌಕರ್ಯಗಳು



## ಕಾಲುಹಾದಿಯಲ್ಲಿ ಬೆಟ್ಟವನ್ನೇರುವವರಿಗೆ ಇರುವ ಸೌಕರ್ಯಗಳು .

ಅಸಂಖ್ಯಾತ ಯಾತ್ರಿಕರು ತಮ್ಮ ಹರಕೆಯ ಬಾಗವಾಗಿ ತಿರುಮಲೆಯನ್ನು ಕಾಲುಹಾದಿಯ ಮೂಲಕ ಏರಿ ತಲುಪುತ್ತಾರೆ ಅವರ ಅನುಕೂಲಕ್ಕಾಗಿ ತಿ ತಿ.ದೇ ಗಳು ಹಲವು ಸೌಕರ್ಯಗಳನ್ನುಂಟಾಗಿಸಿವೆ

* ಬೆಟ್ಟವನ್ನು ಹತ್ತುವ ಯಾತ್ರಿಕರಿಗಾಗಿ ತಿರುಪತಿಯ ರೈಲ್ವೆ ನಿಲ್ದಾಣದಿಂದ ಕೇಂದ್ರ ಬಸ್‌ನಿಲ್ದಾಣ ಕಪಿಲತೀರ್ಥಗಳ ಮೂಲಕ ಹಾದು ಅಲಿಪಿರಿಯನ್ನು ತಲುಪುವಂತೆ ಎರಡು ಬಸ್‌ಗಳನ್ನು ಉಚಿತವಾಗಿ ಹೊರಡಿಸಲಾಗುತ್ತಿದೆ ಈ ಉಚಿತ ಪ್ರಯಾಣದ ಬಸ್‌ಗಳು ಬೆಳಗ್ಗೆ 4-00 ಗಂಟೆಯಿಂದ ರಾತ್ರಿ 11-00 ಗಂಟೆಯವರೆಗೆ ಅರವತ್ನಾಲ್ಕು ಬಾರಿ ನಡೆಯುತ್ತವೆ
* ತಿರುಪತಿಯ ಸತ್ರಗಳಿಂದ / ಅಲಿಪಿರಿಯಿಂದ ತಿರುಮಲೆಗೆ ಯಾತ್ರಿಕರ ಸಾಮಾನುಗಳನ್ನು ಬೆಟ್ಟಕ್ಕೆ ಉಚಿತವಾಗಿ ಸಾಗಿಸಲಾಗುವುದು
* ಗಾಳಿಗೋಪುರ, ಚಿಟ್ಟಿಯೆಕ್ಕುಡು, ಮಾಮಂಡೂರು ಮಿಟ್ಟ, ನರಸಿಂಹಸ್ವಾಮಿ ಗುಡಿ, ಮೊಣಕಾಲು ಮುರಿ ಮೊದಲಾದೆಡೆಗಳಲ್ಲಿ ಅಡಿಗೆ ಮಾಡಿಕೊಳ್ಳುವ ಏರ್ಪಾಡು
* ಕಾಲುಹಾದಿಯುದ್ದಕ್ಕೂ ಕುಡಿಯುವ ನೀರಿನ ಸೌಲಭ್ಯವಿದೆ
* ಕಾಲುಹಾದಿಯಲ್ಲಿ ಶೌಚಗೃಹಗಳೂ ಉಂಟು
* ಮುಖ್ಯವಾದ ಆಯಕಟ್ಟಿನ ಸ್ಥಳಗಳಲ್ಲಿ ವಿಶ್ರಾಂತಿ ಪಡೆಯಲು ನೆರಳಿನ ವ್ಯವಸ್ಥೆ
* ವಂಚಕರು, ಮೋಸಗಾರರ ಪಾಲಿಗೆ ಸಿಕ್ಕಿ ಯಾತ್ರಿಕರು ವಂಚಿತರಾಗದಂತೆ ನೋಡಿಕೊಳ್ಳಲು ಹಗಲು ರಾತ್ರಿ ಸಂರಕ್ಷಕ ಬಟರ, ಗೂರ್ಖಾಗಳ, ಪೋಲೀಸರ ಕಾವಲು ಪಹರೆ
* ಸ್ಥಳೀಯ ಪ್ರಸಾರ ಪದ್ಧತಿಯಲ್ಲಿ ಧಾರ್ಮಿಕ ಕಾರ್ಯಕ್ರಮಗಳ ಪ್ರಸಾರ

## ಸರದಿಯ ಸಾಲಿನಲ್ಲಿ ಯಾತ್ರಿಕರ ಸೌಲಭ್ಯಗಳು .

ಸರದಿಯ ಸಾಲಿನ ಕೋಣೆಗಳಲ್ಲಿ ಸ್ವಾಮಿಯ ದರ್ಶನಕ್ಕೆಂದು ಯಾತ್ರಿಕರು ಕಾಯುವ ಸಮಯವನ್ನು ಕಡಿಮೆ ಮಾಡುವಂತಹ ಅನೇಕ ಹೊಸಹೊಸ ಕ್ರಮಗಳನ್ನು ತಿ ತಿ ದೇವ ಸ್ಥಾನಗಳು ಆಲಯದ ದೈನಂದಿನ ಸೇವೆಗಳಲ್ಲಿ ಪ್ರವೇಶಗೊಳಿಸಿವೆ ಜೊತೆಗೇ ಕಾಯುವ ಕೋಣೆಗಳಲ್ಲಿ ಯಾತ್ರಿಕರಿಗೆ ಬೇಸರವಾಗದಂತೆ ಅವರ ಮನಸ್ಸಿಗೆ ಉಲ್ಲಾಸವಾಗುವಂತೆ ಈ ಕೆಲವು ಕ್ರಮಗಳನ್ನೂ ಕೈಗೊಳ್ಳಲಾಗಿದೆ

* ಗಾಳಿ ಬೆಳಕುಗಳ ವಿಶಾಲವಾದ ಆರೋಗ್ಯಕರವಾದ ವಿದ್ಯುತ್ ಪಂಖಗಳಿಂದ ಕೂಡಿದ ಕಾಯುವ ಕೋಣೆಗಳು
* ತಿ ತಿ.ದೇ ಕ್ಯಾಂಟೀನಿನಿಂದ ಒಳಗಡೆ ಅಲ್ಪೋಪಹಾರ ಸೌಲಭ್ಯ
* ಆಹಾರದ ಪೊಟ್ಟಣಗಳು ಸರಸವಾದ ದರಗಳಲ್ಲಿ ಸಿಗುವ ಏರ್ಪಾಡು
* ಆಂಧ್ರಪ್ರದೇಶ ಡೈರಿ ಅಬಿವೃದ್ಧಿ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ
* ಪ್ರಥಮ ಚಿಕಿತ್ಸೆ
* ಸರದಿಯ ಸಾಲಿನ ಕೋಣೆಗಳಲ್ಲಿ ಶೌಚಗೃಹ ವ್ಯವಸ್ಥೆ.
* ಕ್ಲೋಸ್ಡ್ ಸರ್ಕ್ಯೂಟ್ ಟಿ ವಿ ಕಾರ್ಯಕ್ರಮಗಳು
* ಭಕ್ತಿ ಸಂಗೀತ, ಹರಿಕಥೆ ಮೊದಲಾದವುಗಳ ಪ್ರಸಾರ
* ವೈಕುಂಠಂ ಕ್ಯೂಕಾಂಪ್ಲೆಕ್ಸ್ ಸಮೀಪದಲ್ಲಿ ಯಾತ್ರಿಕರು ತಮ್ಮ ವಸ್ತುಗಳನ್ನು ಸುರಕ್ಷಿತಗೊಳಿಸಬಹುದು ಸರದಿಯ ಸಾಲಿನಲ್ಲಿ ನಡೆಯುತ್ತ ಸರಂಜಾಮುಗಳನ್ನು ಹೊತ್ತು ನಡೆಯಬೇಕಾಗಿಲ್ಲ
* ಸರದಿಯ ಸಾಲಿಗೆ ಸೇರುವ ಸ್ಥಳಗಳಲ್ಲಿ ಪಾದರಕ್ಷೆಗಳನ್ನು ಬದ್ರಪಡಿಸುವ ಸೌಲಭ್ಯವಿದೆ
* ವಂಚಕ ದಳ್ಳಾಳಿಗಳಿಂದ ಉದ್ಯೋಗಿಗಳ ಭ್ರಷ್ಟತೆಯನ್ನು ನಿವಾರಿಸಲು ಆಲಯದ ಮಹಾದ್ವಾರದಲ್ಲಿ ಒಬ್ಬ ಅಧಿಕಾರಿಯ ನೇಮಕ ಇವರು ದೂರುಗಳನ್ನೂ ವಿಚಾರಿಸುವರು
* ವೈಕುಂಠಂ ಕ್ಯೂಕಾಂಪ್ಲೆಕ್ಸ್‌ನಲ್ಲಿ ಯಾತ್ರಿಕರ ಅನುಕೂಲಗಳನ್ನು ನೋಡಿಕೊಳ್ಳಲು ಒಬ್ಬ ಅಧಿಕಾರಿಯ ನೇಮಕ

## ಇತರ ಸೌಲಭ್ಯಗಳು

* ತಿರುಪತಿಯ ತಿರುಚಾನೂರು ರಸ್ತೆಯಲ್ಲಿನ ಶ್ರೀನಿವಾಸ ಕಲ್ಯಾಣ ಮಂಟಪಗಳಲ್ಲಿ ನಾಲ್ಕು ಮದುವೆಯ ಮಂಟಪಗಳಿದ್ದು ಇಲ್ಲಿ ಗ್ಯಾಸ್ ಒಲೆ ಮೊದಲಾದ ಆಧುನಿಕ ಸೌಲಭ್ಯ ಗಳುಂಟು ಸರಸವಾದ ಸೇವಾಶುಲ್ಕದ ಈ ಕಲ್ಯಾಣಮಂಟಪಗಳ ಬಾಡಿಗೆಯ ಕಾಲವ್ಯವಧಿ ಮಧ್ಯಾಹ್ನ 3 ರಿಂದ ಮದ್ಯಾಹ್ನ 3 ಗಂಟೆ ಶ್ರೀನಿವಾಸಕಲ್ಯಾಣ ಮಂಟಪದ ಎದುರು ಶ್ರೀ ಪದ್ಮಾವತೀ ಕಲ್ಯಾಣಮಂಟಪಗಳ ಸಮುದಾಯದಲ್ಲಿ ಹೆಚ್ಚು ಕಲ್ಯಾಣ ಮಂಟಪಗಳುಂಟು

  ಎಸ್.ವಿ ಅತಿಥಿಗೃಹ ಕ್ಯಾಂಟೀನ್ ತಿರುಮಲೆಯ ಎಸ್ ವಿ ಅತಿಥಿಗೃಹದ ಕ್ಯಾಂಟೀನ್‌ನಲ್ಲಿ ಸರಸದರಗಳಲ್ಲಿ ಆರೋಗ್ಯಕರವಾದ ಸಂತುಲಿತ ಊಟ ಉಪಹಾರಗಳು ದೊರೆಯುತ್ತವೆ

  ಉಚಿತ ಭೋಜನ ಸ್ವಾಮಿಯನ್ನು ದರ್ಶಿಸಿ ಹೊರಬರುವಾಗ ಆಲಯದಲ್ಲಿ ನೀಡಲಾಗುವ ಉಚಿತ ಬೋಜನ ಚೀಟಿಗಳ ವಿತರಣೆಯ ಮೂಲಕ ತಿರುಮಲೆಯ ತಿ ತಿ ದೇ ಕ್ಯಾಂಟೀನ್‌ನಲ್ಲಿ ಬೆಳಗ್ಗೆ 10-00 ಗಂಟೆಯಿಂದ ರಾತ್ರಿ 1-00 ಗಂಟೆಯವರೆಗೆ ಉಚಿತವಾಗಿ ಸಂತುಲಿತ ಭೋಜನ ನೀಡಲಾಗುತ್ತದೆ

  ಉಚಿತ ವೈದ್ಯಕೀಯ ಚಿಕಿತ್ಸೆ ಶೇಷಾದ್ರಿನಗರದ ಬಳಿಯ ಅಶ್ವಿನಿ ಆಸ್ಪತ್ರೆಯಲ್ಲಿ ಯಾತ್ರಿಕರಿಗೆ ಉಚಿತವಾಗಿ ವೈದ್ಯ ಸೌಲಭ್ಯ ದೊರೆಯುತ್ತದೆ

  ಅಂಚೆ ಮತ್ತು ತಂತಿ ಕೇಂದ್ರ ಸ್ವಾಗತಕಚೇರಿಯ ಬಳಿ ಅಂಚೆ ಕಚೇರಿ, ತಂತಿ ಕಚೇರಿಗಳಿವೆ

  ಉಚಿತ ಬಸ್ ತಿರುಮಲೆಯಲ್ಲಿ ಕಾಟೇಜುಗಳು, ಸತ್ರಗಳು, ಆಲಯ ಮೊದಲಾದವನ್ನು ಮುಟ್ಟುವಂತೆ ಉಚಿತ ಬಸ್‌ಗಳ ಓಡಾಡುತ್ತವೆ

  ಏರ್‌ಲೈನ್ಸ್ ಕೋಚು ತಿರುಪತಿಯ ಬಳಿಯ ವಿಮಾನ ನಿಲ್ದಾಣದಿಂದ ತಿರುಮಲೆಗೆ ಹಾಗೂ ಹಿಂದಕ್ಕೆ ವಿಮಾನಯಾತ್ರಿಕರ ಅನುಕೂಲಕ್ಕಾಗಿ ಎ ಪಿ ಎಸ್ ಆರ್ ಟಿ.ಸಿ ಯವರು ಲಕ್ಸುರಿ ಕೋಚನ್ನು ನಡೆಸುತ್ತಾರೆ

  ಚಿನ್ನ ಹಾಗೂ ಬೆಳ್ಳಿ ಪದಕಗಳ ಮಾರಾಟ ತಿರುಮಲಯ ಆಲಯದ ಒಳಗಡೆ ಸ್ವಾಮಿಯ ಹುಂಡಿಯ ಎದುರು ಭಾಗದಲ್ಲಿ, ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀ ಅಮ್ಮನವರ ಚಿತ್ರಗಳಿರುವ ಚಿನ್ನ ಹಾಗೂ ಬೆಳ್ಳಿಯ ಪದಕಗಳನ್ನು ಕೊಂಡುಕೊಳ್ಳಬಹುದು

  ಕಲ್ಯಾಣಕಟ್ಟೆ ತಿರುಮಲೆಯ ಕಲ್ಯಾಣಕಟ್ಟೆಯಲ್ಲಿ ಯಾತ್ರಿಕರು ತಮ್ಮ ಹರಕೆಯ ಕೂದಲನ್ನು ಉಚಿತವಾಗಿ ನೀಡಬಹುದು ಕಾಟೇಜುಗಳ ಬಳಿಯಲ್ಲಿ ಇದಕ್ಕೆ 10 ರೂಪಾಯಿ ಶುಲ್ಕ

  ಪ್ರಕಟನೆಗಳ ಮಾರಾಟ ತಿರುಮಲೆಯ ಆರ್ ಟಿ.ಸಿ. ಬಸ್ ನಿಲ್ದಾಣದಲ್ಲಿ ಹಾಗೂ ತಿರುಪತಿಯಲ್ಲಿನ ಮೊದಲಸತ್ರ, ಶ್ರೀ ಗೋವಿಂದರಾಜಸ್ವಾಮಿ ಗುಡಿಯ ಬಳಿಯ ಧ್ಯಾನಮಂದಿರ, ರೈಲ್ವೆ ನಿಲ್ದಾಣಗಳಲ್ಲಿ ತಿ ತಿ ದೇವಸ್ಥಾನಗಳು ಪ್ರಕಟಿಸುವ ಎಲ್ಲ ಗ್ರಂಥಗಳು, ಧ್ವನಿಸುರುಳಿಗಳು, ದೊರಯುತ್ತವೆ

  ರೈಲ್ವೆ ಮುಂಗಡ ಕಾಯ್ದಿರಿಸುವಿಕೆ ತಿರುಮಲೆಯ ಕೇಂದ್ರ ಸ್ವಾಗತ ಕಚೇರಿಯಲ್ಲಿರುವ ರೈಲ್ವೆ ಕೌಂಟರಿನಲ್ಲಿ ಬಸ್ - ರೈಲು ಪ್ರಯಾಣಗಳನ್ನು ಮುಂಗಡ ಕಾಯ್ದಿರಿಸಬಹುದು

  ವಾಹನ ದುರಸ್ತಿ ತಿರುಮಲೆಯ ಹಾದಿಯಲ್ಲಿ ಕೆಟ್ಟು ನಿಲ್ಲುವ ವಾಹನಗಳ ದುರಸ್ತಿಗಾಗಿ ಒಂದು ದುರಸ್ತಿ ವಾಹನವು ಮೆಕ್ಯಾನಿಕ್ ಹಾಗೂ ಉಪಕರಣಗಳೊಂದಿಗೆ ಸಿದ್ಧವಾಗಿ ರುತ್ತದೆ ತಿರುಪತಿಯ ಅಲಿಪಿರಿ ಅಥವಾ ತಿರುಮಲಯ ಟೋಲ್‌ಗೇಟಿನಲ್ಲಿ ವಿಚಾರಿಸಿ ಈ ಸೌಲಭ್ಯ ಪಡಯಬಹುದು

  ಪುರೋಹಿತ ಸಂಘ ತಿರುಮಲೆಯಲ್ಲಿ ವೈದಿಕ ಕ್ರಿಯೆಗಳನ್ನು ಯಾತ್ರಿಕರು ನಡಸಲು ಸುಲಭವಾಗುವಂತೆ, ಈ ಕಲಸಗಳನ್ನು ನಿರ್ವಹಿಸಬಲ್ಲ ಪಾಂಡಿತ್ಯ ಅನುಭವಗಳನ್ನುಳ್ಳ ಪುರೋಹಿತರ ಸಂಘವನ್ನು ತಿ ತಿ.ದೇ ಸಂಘಟಿಸಿದೆ ಸದರಿ ಕ್ರಿಯೆಗಳ ಶುಲ್ಕವನ್ನೂ ತಿ ತಿ ದೇ ನಿರ್ಧರಿಸಿ ಪ್ರಕಟಿಸಿವ ಸಂಕಲ್ಪ, ನಾಮಕರಣ, ಚೌಲ, ಉಪನಯನ, ವಿವಾಹ, ಪಿಂಡಪ್ರದಾನ ಮೊದಲಾದ ವೈದಿಕ ಕ್ರಿಯೆಗಳನ್ನು ಮಾಡಬಯಸುವವರು ಪುರೋಹಿತ ಸಂಘದಲ್ಲಿ ವಿಚಾರಿಸಬಹುದು ತಿ ತಿ ದೇ ವಿಚಾರಣಾಕೇಂದ್ರದಲ್ಲಿ ವಿಚಾರಿಸಬಹುದು

